# ಪ್ರೊ. ಕೀರ್ತಿನಾಥ ಕುರ್ತಕೋಟಿ



ಡಾ. ಸುಬ್ಬಣ್ಣ ರೈ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರೊ. ಕೀರ್ತಿನಾಥ ಕುರ್ತಕೋಟಿ

ಡಾ. ಸುಬ್ಬಣ್ಣ ರೈ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

**Keerthinatha Kurthakoti** : By Dr. Subbanna Rai, Published by Dr.Karigowda Beechanahalli, Director, prasaranga, Kannada University, Hampi, Vidyaranya, Kamalalpura 583221, PP : VIII + 47
Rs. 12/-

First edition 1995.

**ನಮ್ಮವರು ಪುಸ್ತಕ ಮಾಲೆ ೬**



**ಪ್ರಕಾಶಕರು**

ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

ಬೆಲೆ : ಹನ್ನೆರಡು ರೂಪಾಯಿಗಳು

**ಮುದ್ರಕರು**

**ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್**
8/2, ಮಾರೇನಹಳ್ಳಿ, ಮೊದಲ ಅಡ್ಡ ರಸ್ತೆ,
23ನೇ ಮುಖ್ಯ ರಸ್ತೆ, ಬೆಂಗಳೂರು - 560 078
ದೂರವಾಣಿ : 642102

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಪರಿವಿಡಿ

# ಪ್ರೊ. ಕೀರ್ತಿನಾಥ ಕುರ್ತಕೋಟಿ

ತಮ್ಮ ಅಂಕಿತನಾಮವನ್ನು ಅನ್ವರ್ಥಗೊಳಿಸಿಕೊಂಡವರು ನಮ್ಮಲ್ಲಿ ಬಹಳ ವಿರಳ. ಅಂತಹ ವಿರಳ ವ್ಯಕ್ತಿಗಳ ಸಾಲಿನಲ್ಲಿ ಪ್ರೊ. ಕೀರ್ತಿನಾಥ ಕುರ್ತಕೋಟಿಯವರೂ ಒಬ್ಬರು. ಹೆಸರಿಗೆ ತಕ್ಕಂತೆ ಅವರು 'ಕನ್ನಡದ ಕೀರ್ತಿ' ಎಂಬುದರಲ್ಲಿ ಉತ್ಪ್ರೇಕ್ಷೆಯೇನೂ ಇಲ್ಲ. ಕಾವ್ಯಮೀಮಾಂಸೆಯ ನೆರಳಿನಲ್ಲಿ ಬರಿಯ ರಸವಿಮರ್ಶೆಯಾಗಿಯಷ್ಟೆ ಪ್ರಚಲಿತವಿದ್ದ ಕನ್ನಡ ವಿಮರ್ಶೆಯನ್ನು ಸ್ಪಷ್ಟವಾದ ಒಂದು ದಾರಿಯಲ್ಲಿ ಮುನ್ನಡೆಸಿದವರು ಕುರ್ತಕೋಟಿಯವರು. ಹಾಗೆಂದು ಅವರು ಕಾವ್ಯ ಮೀಮಾಂಸೆಯ ತತ್ವಗಳನ್ನು ಪೂರ್ಣವಾಗಿ ಧಿಕ್ಕರಿಸಿ ಹೊಸ ವಿಮರ್ಶಾ ಮಾರ್ಗವನ್ನು ಕಂಡು ಕೊಂಡರೆಂದು ತಿಳಿದರೆ ತಪ್ಪಾಗುತ್ತದೆ. ಭಾರತೀಯ ಹಾಗೂ ಪಾಶ್ಚಿಮಾತ್ಯ ಕಾವ್ಯಮೀಮಾಂಸೆಗಳ ಬಗೆಗಿನ ಜ್ಞಾನ, ಸಂಸ್ಕೃತ, ಕನ್ನಡ ಮತ್ತು ಆಂಗ್ಲ ಸಾಹಿತ್ಯಕೃತಿಗಳ ಆಳವಾದ ಅಧ್ಯಯನ, ಸಂಸ್ಕೃತಿಯ ಬಗೆಗಿನ ವಿಶೇಷವಾದ ಅರಿವು - ಇವೆಲ್ಲವುಗಳ ಜತೆಗೆ ಸ್ವಂತದ್ದಾದ ಪ್ರತಿಭೆ-ಪಾಂಡಿತ್ಯಗಳೂ ಮೇಳವಿಸಿ ಕುರ್ತಕೋಟಿಯವರ ವಿಮರ್ಶಾ ಮಾರ್ಗ ರೂಪುಗೊಂಡಿದೆ.

ಧಾರವಾಡ ಜಿಲ್ಲೆಯ ಗದಗ ಸಮೀಪದ ಕುರ್ತಕೋಟಿಯಲ್ಲಿ ೧೯೨೮ರ ಅಕ್ಟೋಬರ್ ೧೩ ರಂದು ಕೀರ್ತಿನಾಥರು ಹುಟ್ಟಿದರು. ತಂದೆ ದತ್ತಪ್ಪಗೌಡ, ತಾಯಿ ಪದ್ಮಾಬಾಯಿ. ಅಜ್ಜ ಕೀರ್ತಿ ಗೌಡರ ಹೆಸರೇ ಮೊಮ್ಮಗನಿಗೂ ದತ್ತವಾಯಿತು -ಕೀರ್ತಿನಾಥ ದತ್ತಪ್ಪ ಗೌಡ ಕುರ್ತಕೋಟಿ. ಅವರದು ವಿದ್ವತ್ಪರಂಪರೆಯ ಸುಸಂಸ್ಕೃತ ಮನೆತನವಾಗಿದ್ದು, ಊರವರೆಲ್ಲಾ 'ಕುರ್ತಕೋಟಿಯ ಗೌಡ' ರೆಂದೇ ಅವರನ್ನು ಕರೆಯುತ್ತಿದ್ದರು. ಹಾಗಾಗಿ ಕೀರ್ತಿನಾಥರಿಗೆ ಹೆಸರಿನೊಂದಿಗೆ ವಿದ್ವತ್ತೂ ತಮ್ಮ ಅಜ್ಜನಿಂದ ದತ್ತವಾಯಿತು.

ಕೀರ್ತಿನಾಥರು ತಮ್ಮ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಗದಗಿನಲ್ಲಿಯೇ ಪೂರೈಸಿ, ೧೯೫೦ ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಿಂದ ಪದವೀಧರರಾದರು. ಪದವಿ ಪಡೆದ ನಂತರ ಗದಗಿನ ವಿದ್ಯಾದಾನ ಸಮಿತಿ ಪ್ರೌಢಶಾಲೆಯಲ್ಲಿ ಶಿಕ್ಷಕ ವೃತ್ತಿಯನ್ನಾರಂಭಿಸಿದರು. ಅಚ್ಚು ಮೆಚ್ಚಿನ ಅಧ್ಯಾಪಕರಾಗಿ ಕೀರ್ತಿ ಮಾಸ್ತರರೆಂದೇ ಪ್ರಸಿದ್ಧರಾದರು. ಮುಂದೆ ೧೯೫೫ ರಿಂದ ೧೯೫೭ರ ವರೆಗೆ ಬೆಳಗಾವಿಯ ಆರ್. ಪಿ. ಡಿ. ಕಾಲೇಜಿನಲ್ಲಿ ಟ್ಯೂಟರ್ ಆಗಿ ಅಲ್ಪಾವಧಿಯ ಸೇವೆ ಸಲ್ಲಿಸಿದರು. ೧೯೫೮ರಲ್ಲಿ ಕರ್ನಾಟಕ

ವಿಶ್ವವಿದ್ಯಾಲಯದಿಂದ ಆಂಗ್ಲ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು, ಪುಣೆಯ ಸರ್ ಪರಶುರಾಮ ಭಾವು ಕಾಲೇಜಿನಲ್ಲಿ ಕೆಲಕಾಲ ಟ್ಯೂಟರ್ ಆಗಿ ಕೆಲಸ ಮಾಡಿದರು. ೧೯೬೭ರಲ್ಲಿ ಕೀರ್ತಿನಾಥರ ವಿದ್ವತ್ತೆಯನ್ನರಿತ ಗುಜರಾತದ ಆನಂದದಲ್ಲಿರುವ ವಲ್ಲಭ ವಿದ್ಯಾನಗರ ಕಾಲೇಜಿನ ಪ್ರಿನ್ಸಿಪಾಲರು ಅವರನ್ನು ತಮ್ಮ ಸಂಸ್ಥೆಗೆ ಕರೆಸಿಕೊಂಡರು. ಸರ್ದಾರ್ ಪಟೇಲ್ ವಿಶ್ವವಿದ್ಯಾಲಯಕ್ಕೆ ಸೇರಿದ ಆ ಕಾಲೇಜಿನಲ್ಲಿ ಆಂಗ್ಲ ಭಾಷಾ ಸಾಹಿತ್ಯದ ಉಪನ್ಯಾಸಕರಾಗಿ ನೇಮಕಗೊಂಡ ಕುರ್ತಕೋಟಿಯವರು ಕ್ರಮೇಣ ಸ್ನಾತಕೋತ್ತರ ತರಗತಿಗಳಿಗೆ ಉಪನ್ಯಾಸಕರಾಗಿ, ಆಂಗ್ಲ ವಿಭಾಗದಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಹಂತ ಹಂತವಾಗಿ ಪದೋನ್ನತಿಯನ್ನು ಗಳಿಸಿದರು. ೩೨ ವರ್ಷಗಳ ಕಾಲ 'ಆನಂದ'ದಲ್ಲಿದ್ದು, ೧೯೮೯ರ ಮಾರ್ಚ್ ಅಂತ್ಯದ ವೇಳೆಗೆ ಸೇವೆಯಿಂದ ನಿವೃತ್ತರಾಗಿ, ಪತ್ನಿ ಮತ್ತು ಮೂವರು ಮಕ್ಕಳೊಂದಿಗೆ ಧಾರವಾಡದಲ್ಲಿ ನೆಲಸಿದರು. ನಿವೃತ್ತಿಯ ನಂತರವೂ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸದಾ ಪ್ರವೃತ್ತರಾಗಿದ್ದಾರೆ.

ಅನೇಕ ವಿದ್ಯಾರ್ಥಿಗಳ ಪಿಎಚ್.ಡಿ ಸಂಶೋಧನೆಗಳಿಗೆ ಕುರ್ತಕೋಟಿಯವರು ಯಶಸ್ವೀ ಮಾರ್ಗದರ್ಶನ ನೀಡಿದ್ದಾರೆ. ಅವರ ಪ್ರತಿಭೆ-ಪಾಂಡಿತ್ಯಗಳನ್ನು ಪರಿಗಣಿಸಿ ಹಲವು ಪ್ರಶಸ್ತಿ -ಬಹುಮಾನ - ಗೌರವಗಳು ಅವರಿಗೆ ಲಭಿಸಿವೆ.[೧] ಇದಲ್ಲದೆ ಅನೇಕ ಸಾಹಿತ್ಯಿಕ ಸಂಘ-ಸಂಸ್ಥೆಗಳೂ ಕುರ್ತಕೋಟಿಯವರ ವಿದ್ವತ್ಪ್ರತಿಭೆಯನ್ನು ಗುರುತಿಸಿ ಗೌರವಿಸಿವೆ. ಹಲವಾರು ಸಂಸ್ಥೆ-ಸಮಿತಿಗಳ ಸದಸ್ಯರಾಗಿಯೂ ಅವರು ಉಪಯುಕ್ತ ಸೇವೆ ಸಲ್ಲಿಸಿದ್ದಾರೆ. ಧಾರವಾಡದ ಮನೋಹರ ಗ್ರಂಥ ಮಾಲೆಯ ಸಾಹಿತ್ಯ ಸಲಹೆಗಾರರಾಗಿ, ಭಾರತೀಯ ಜ್ಞಾನ ಪೀಠ ಪ್ರಶಸ್ತಿಯ ಪ್ರಾದೇಶಿಕ (ಕನ್ನಡ) ಸಮಿತಿ ಸದಸ್ಯರಾಗಿ, ಅದೇ ರೀತಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಾದೇಶಿಕ ಭಾಷಾ (ಕನ್ನಡ) ಸಲಹಾ ಸಮಿತಿ ಸದಸ್ಯರಾಗಿ ಕುರ್ತಕೋಟಿಯವರು ಮಾಡಿದ ಕಾರ್ಯ ಗಮನಾರ್ಹವಾದುದು.

ಕುರ್ತಕೋಟಿಯವರು ಇಂದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಓರ್ವ ಮಹತ್ವದ ವಿಮರ್ಶಕರಾಗಿ ನೆಲೆನಿಂತಿದ್ದಾರೆ. ಹಾಗೆಂದು ಅವರು ವಿಮರ್ಶೆಯ ಮೂಲಕವೇ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದವರಲ್ಲ. ಕವಿತೆ, ನಾಟಕ, ಹರಟೆಗಳನ್ನು ಎಳೆ ವಯಸ್ಸಿನಲ್ಲಿಯೇ ಬರೆಯುತ್ತಿದ್ದ ಕೀರ್ತಿನಾಥರಿಗೆ ಸಾಹಿತ್ಯದ ಸಂಸ್ಕಾರ ಬಾಲ್ಯದಿಂದಲೂ ಬೆಳೆದು ಬಂದಿತ್ತು. ಗದಗದ ರಾಯನ ಗೌಡರ ಗ್ರಂಥ ಭಂಡಾರದಲ್ಲಿದ್ದ ಕನ್ನಡ, ಸಂಸ್ಕೃತ ಹಾಗೂ ಇಂಗ್ಲಿಷ್ ಭಾಷೆಗಳ ಹತ್ತು ಸಾವಿರಕ್ಕೂ ಹೆಚ್ಚು ಪುಸ್ತಕಗಳನ್ನು ಅವರು ಚಿಕ್ಕಂದಿನಲ್ಲೇ ಅಧ್ಯಯನ ಮಾಡಿದ್ದರು. ತಮ್ಮ ಇಪ್ಪತ್ತರ ಎಳವೆಯಸ್ಸಲ್ಲೇ (೧೯೪೮) ಶಂಕರ ಮೊಕಾಶಿ ಪುಣೇಕರ ಮತ್ತು ಗೋವಿಂದ ಕಣೇಕಲ್ಲರ ಜತೆಸೇರಿ 'ಗಾನಕೇಳಿ' ಎಂಬ ಕವನ ಸಂಕಲನವೊಂದನ್ನು ಪ್ರಕಟಿಸಿದ್ದರು. ಅದರಲ್ಲಿ ಕೀರ್ತಿನಾಥರ ಆರು ಕವಿತೆಗಳು ಸೇರ್ಪಡೆಗೊಂಡಿದ್ದವು. ಮೊತ್ತಮೊದಲು ಪ್ರಕಟವಾದ ಅವರ ಸ್ವತಂತ್ರ ಕೃತಿ ನಾಟಕವೆಂಬುದು ಗಮನಿಸಬೇಕಾದ ಅಂಶವಾಗಿದೆ.

೧. ವಿವರ 'ಅನುಬಂಧ ೧' ರಲ್ಲಿದೆ.

ಕುರ್ತಕೋಟಿಯವರ ಪ್ರತಿಭೆ-ಪಾಂಡಿತ್ಯ-ವಾಗ್ಮಿತೆಗಳಿಗೂ ತಾಂಬೂಲ ಸೇವನೆಗೂ ಏನೋ ನಿಕಟ ಸಂಬಂಧವಿದ್ದಂತಿದೆ. ಕುಮಾರವ್ಯಾಸನ ಕಾವ್ಯ ಪ್ರತಿಭೆಗೆ ಸ್ನಾನ ಮಾಡಿದ ಒದ್ದೆ ಬಟ್ಟೆ ಹೇಗೆ ಸ್ಫೂರ್ತಿದಾಯಕವಾಗಿತ್ತೋ ಹಾಗೆಯೇ ಅವನ ವಂಶಸ್ಥರಾದ ಕುರ್ತಕೋಟಿಯವರ ವಿಮರ್ಶನ ಪ್ರಜ್ಞೆಗೆ ಅವರು ಸದಾ ಬಾಯ್ತುಂಬ ಮೆಲ್ಲುತ್ತಿರುವ ಎಲೆ-ಅಡಿಕೆಯೇ ಪ್ರೇರಕ ಶಕ್ತಿಯೆಂದು ತೋರುತ್ತದೆ. ಎಲ್ಲಿಗೇ ಹೋಗಲಿ ಎಂದೂ ಅವರು ಎಲೆ-ಅಡಿಕೆ ಡಬ್ಬಿಯನ್ನು ಸಂಗಡ ಒಯ್ಯಲು ಮರೆತವರಲ್ಲ. ವಿದೇಶಗಳಲ್ಲಿ ತಾಂಬೂಲದ ರಸ ಉಗುಳಲು ಸರಿಯಾದ ಜಾಗವಿಲ್ಲವೆಂಬ ಕಾರಣಕ್ಕಾಗಿ ಕುರ್ತಕೋಟಿಯವರು ಅವಕಾಶ ದೊರೆತರೂ ವಿದೇಶ ಪ್ರವಾಸ ಕೈಗೊಂಡಿಲ್ಲವೆಂದು ತೀರಾ ಆತ್ಮೀಯರೆನಿಸಿದ ಕೆಲವರು ಅವರನ್ನು ಪರಿಹಾಸ್ಯ ಮಾಡುವುದಿದೆ. ಅಷ್ಟರಮಟ್ಟಿಗೆ ತಾಂಬೂಲಕ್ಕೂ, ಕುರ್ತಕೋಟಿಯವರ ವ್ಯಕ್ತಿತ್ವಕ್ಕೂ ನಂಟು ಬೆಳೆದುಬಿಟ್ಟಿದೆ.

## ಕೀರ್ತಿ ಸಾಹಿತ್ಯ

ಕೀರ್ತಿನಾಥ ಕುರ್ತಕೋಟಿಯವರ ಸಾಹಿತ್ಯವನ್ನು ಮುಖ್ಯವಾಗಿ ನಾಟಕ, ಕವಿತೆ, ಹರಟೆ, ಅಂಕಣ ಬರಹ, ವಿಮರ್ಶೆ ಇತ್ಯಾದಿ ಪ್ರಕಾರಗಳಾಗಿ ವರ್ಗೀಕರಿಸಿಕೊಳ್ಳ ಬಹುದಾಗಿದೆ. ಸಂಸ್ಕೃತ, ಮರಾಠಿ, ಇಂಗ್ಲಿಷ್ ಮುಂತಾದ ಭಾಷೆಗಳಿಂದ ಸಾಹಿತ್ಯ ಕೃತಿಗಳನ್ನು ಅನುವಾದಿಸುವುದರಲ್ಲೂ ಅವರು ಸಿದ್ಧಹಸ್ತರು. ಆದರೂ ಅವರ ಮುಖ್ಯ ನೆಲೆ ವಿಮರ್ಶೆ ಎಂಬುದರಲ್ಲಿ ಎರಡು ಮಾತಿಲ್ಲ. ಕುರ್ತಕೋಟಿಯವರು ಇಂದು ಕನ್ನಡದ ಓರ್ವ ಪ್ರಾತಿನಿಧಿಕ ವಿಮರ್ಶಕರಾಗಿ ಬೆಳೆದು ನಿಂತಿರುವರಾದರೂ ಅವರು ಸಾಹಿತಿಯೆಂದು ಕನ್ನಡ ಜನತೆಗೆ ಪರಿಚಿತರಾದುದು ತಮ್ಮ ನಾಟಕಕೃತಿಗಳಿಂದ. ೨೮ರ ಹರೆಯದಲ್ಲೇ (೧೯೫೬) ಅವರು ಬರೆದು ಪ್ರಕಟಿಸಿದ ''ಆಮನಿ'' ಹಾಗೂ ''ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು '' ಸಾಹಿತ್ಯಕೃತಿಗಳಾಗಿಯೂ ರಂಗ ಕೃತಿಗಳಾಗಿಯೂ ಹೆಸರು ಗಳಿಸಿವೆ.

### ೧. ಆಮನಿ(೧೯೫೬)

ಕುರ್ತಕೋಟಿಯವರಿಗೆ ಮುಂಬಯಿ ಸರಕಾರದ ಪ್ರಥಮ ಬಹುಮಾನವನ್ನು ಗಳಿಸಿಕೊಟ್ಟ ಕೃತಿಯಿದು. ಇದು ೧೯೮೬ರಲ್ಲಿ ಗಿರೀಶ ಕಾರ್ನಾಡರ ನಿರ್ದೇಶನದಲ್ಲಿ ದೆಹಲಿ ದೂರದರ್ಶನದಿಂದ ಪ್ರಸಾರಗೊಂಡಿತು. ಇದನ್ನು ರಚಿಸುವಲ್ಲಿ ಕುರ್ತಕೋಟಿಯವರಿಗೆ ಪ್ರೇರಣೆಯೊದಗಿಸಿದ್ದು ಜಿ. ಬಿ. ಜೋಶಿಯವರು ಹೇಳಿದ ಒಂದು ಕತೆ. ೧೯೫೬ರ ಮಾರ್ಚ್ ತಿಂಗಳಲ್ಲಿ ಧಾರವಾಡದಿಂದ ಬೆಳಗಾವಿಗೆ ಹೋಗಬೇಕಾಗಿದ್ದ ಕುರ್ತಕೋಟಿಯವರನ್ನು ಬೀಳ್ಕೊಡಲು ಮೋಟಾರ್ ಸ್ಟ್ಯಾಂಡಿನ ವರೆಗೆ ಹೊರಟ ಜೋಶಿಯವರು ದಾರಿಯುದ್ದಕ್ಕೂ ಈ ಕಥೆಯನ್ನು ಹೇಳುತ್ತಾ ಸಾಗಿದರಂತೆ. ಅದನ್ನು ಕೇಳಿದ ಕುರ್ತಕೋಟಿಯವರು ''ಇದು ಬರೆದರ ಉತ್ತಮ ನಾಟಕ ಆಗತದ ನೋಡ್ರಿ'' ಎಂದರಂತೆ. ''ಹಂಗಾದರ ಬರೆದು ಬಿಡ್ರಲಾ'' ಎಂದ ಜೋಶಿಯವರ ಮಾತಿಗೆ ಕಟ್ಟು ಬಿದ್ದು ಅಂದು ಕಾಲೇಜಿಗೆ ರಜ ಹಾಕಿ ಜೋಶಿಯವರ ಮನೆಯಲ್ಲೇ ಕುಳಿತು

ಏಕಾಗ್ರಚಿತ್ತದಿಂದ ನಾಟಕವನ್ನು ಬರೆಯಲು ಪ್ರಾರಂಭಿಸಿದರಂತೆ. ಹೀಗೆ ಒಂದೇ ಕೂರಿನಲ್ಲಿ 'ಆ ಮನಿ' ನಾಟಕವನ್ನು ಕುರ್ತಕೋಟಿಯವರು ಬರೆದು ಮುಗಿಸಿದರೆಂದು ಸ್ವತಃ ಜಿ. ಬಿ. ಜೋಶಿಯವರೇ ಹೇಳಿಕೊಂಡಿದ್ದಾರೆ. (' ಆ ಮನಿ'; ಹಿನ್ನೆಲೆ; ಪು.೭)

ಕುರ್ತಕೋಟಿಯವರೇ ಹೇಳುವಂತೆ ''ಆ ಮನಿ ಸಂಪೂರ್ಣವಾಗಿ ಸಾಂಕೇತಿಕವಾದ ನಾಟಕ. ಕೃತಿಯ ದ್ರವ್ಯವೇ ಅದು. 'ಆ ಮನಿ'ಯ ಸುತ್ತು ಹಬ್ಬಿ ರೂಢವಾಗಿರುವ ಸಾವು-ನೋವಿನ ಕಥೆಯನ್ನು ಮುಪ್ಪಿನ ಮುದುಕನೊಬ್ಬ ಹೇಳುತ್ತ ಆ ಪ್ರದೇಶದ ಇತಿಹಾಸವನ್ನು ಜೀವಂತವಾಗಿ ಮಾಡುತ್ತಾನೆ. ಅವನು ಕತೆ ಹೇಳುತ್ತಿರುವಾಗಲೇ ಶಾಲೆಯ ಹುಡುಗರು ಆ ಮನೆಯಲ್ಲಿ ಬಂದು ಮದುವೆಯ ಆಟವನ್ನು ಹೂಡಿ ಸಾವನ್ನು ಇಲ್ಲದಾಗಿಸುತ್ತಾರೆ. ಆಟ ಮುಗಿದ ಮೇಲೆ ಮತ್ತೆ ' ಆಮನಿ' ನಿಚ್ಚಳವಾಗಿ ಕಣ್ಣೆದುರು ನಿಲ್ಲುತ್ತದೆ. ಮನೆಯ ಬಾಗಿಲು ತೆರೆದು ಹೊರಬಂದ ತಾಯಿಯ ದೆವ್ವ ಮಲಗಿದ ಮಕ್ಕಳನ್ನು ಹರಸುತ್ತದೆ. ಜೀವನವೇ ಜೀವನದ ಸಂಕೇತವಾಗಿರುವದು ಈ ನಾಟಕದ ವೈಶಿಷ್ಟ್ಯಗಳಲ್ಲೊಂದಾಗಿದೆ. ಈ ನಾಟಕದ ಘಟನೆಗಳೆಲ್ಲ ವಾಸ್ತವಿಕವಾಗಿವೆ. ಭಾಷೆ ಹಾಗೂ ಉಳಿದ ವಿವರಗಳೂ ವಾಸ್ತವಿಕವಾಗಿವೆ. ಅದ್ಭುತ ರಮ್ಯತೆ ಈ ವಾಸ್ತವಿಕತೆಯನೊಡೆದೇ ಹೊರ ಬರುತ್ತದೆ. ವಾಸ್ತವತೆ ಅದ್ಭುತರಮ್ಯತೆಯ ಪ್ರತೀಕದಂತೆ ಭಾಸವಾಗುತ್ತದೆ. ಮಕ್ಕಳು ಬಾಳಿನ ಪ್ರತಿಮೆಗಳಾಗುತ್ತಾರೆ. ಮುದುಕನ ಕತೆಯಿಂದ ನಿರ್ಜೀವವಾದ ಮನೆ ಸಜೀವವಾಗುತ್ತದೆ. ನಾಟಕ ಸಹಜವಾಗಿ ಸಾಂಕೇತಿಕತೆಯನ್ನು ಆಶ್ರಯಿಸಿಬಿಡುತ್ತದೆ. ಈ ರೂಪಾಂತರಕ್ಕೆ ವಾತಾವರಣ ಬಹಳ ಸಹಕಾರಿಯಾಗಿದೆ. ಮುದುಕ ಕತೆ ಹೇಳುವದು ಮಟ ಮಟ ಮಧ್ಯಾಹ್ನದಲ್ಲಿ. ಹುಡುಗರು ಸಂಜೆಯ ಬೆಳಕಿನಲ್ಲಿ ಬಾಳುವೆಯ ಕಣ್ಣು ಮುಚ್ಚಣಿಕೆಯಾಟವನ್ನಾಡುತ್ತಾರೆ. ಆಟ ಮುಗಿದ ಕೂಡಲೆ ಸುತ್ತಲೂ ಹಬ್ಬಿದ ಬೆಳುದಿಂಗಳ ಅರಿವಾಗುತ್ತದೆ. ಈ ವಾತಾವರಣದ ಮಾಯೆ ನಾಟಕದ ವಸ್ತುವನ್ನು ಸಾಂಕೇತಿಕತೆಯಿಂದ ತುಂಬಿ ಬಿಡುತ್ತದೆ.'' (ಯುಗಧರ್ಮ ಹಾಗೂ ಸಾಹಿತ್ಯ ದರ್ಶನ; ೧೭೧) ಬೇರೊಂದು ಕಡೆ ಅವರು ಅಭಿಪ್ರಾಯಪಡುವಂತೆ ''ಜೀವನದಲ್ಲಿ ಕಾಣುವ ಸತ್ಯದ ಪರಿಗಳನ್ನು ಒಂದೊಂದಾಗಿ ಬಿಚ್ಚಿ ನೋಡಿದಾಗ ಕೊನೆಗೆ ಅನಿರ್ವಚನೀಯವಾದ ಗೂಢವೊಂದೇ ಉಳಿಯುತ್ತದೆ. ಮಕ್ಕಳ ಜೀವನದಲ್ಲಿ, ಆಟಗಳಲ್ಲಿ, ಉತ್ಸಾಹದಲ್ಲಿ, ಅನುಕರಣದಲ್ಲಿ ಮನುಕುಲದ ಹೃದಯ ಸ್ಪಂದನ ಕೇಳುತ್ತಿದೆ. ಇತಿಹಾಸದ ಫಲವಾಗಿ, ಭವಿಷ್ಯದ ಬೀಜವಾಗಿರುವ ಶೈಶವದ ಅಲೌಕಿಕ ಸೌಂದರ್ಯವನ್ನು ಸೆರೆಹಿಡಿಯುವ ಸಾಹಸ ಇಲ್ಲಿದೆ. '' ('ಆ ಮನಿ' -ಮೊದಲ ಮಾತು; ಪು. ೨)

ಹಾ. ಮಾ. ನಾಯಕರಂದಂತೆ ''ನಾಟಕದ ಹಿನ್ನೆಲೆಯಲ್ಲಿ ನಿಂತ ಆಮನೆ ನಾಟಕದ ಕೇಂದ್ರಬಿಂದು. ಅಷ್ಟೇ ಅಲ್ಲ. ಜೀವಂತವಾದ ಒಂದು ಮುಖ್ಯ ಪಾತ್ರವೂ ಹೌದು. ಮಿಕ್ಕೆಲ್ಲ ಪಾತ್ರಗಳೂ ಅದರ ಸುತ್ತ ಸುತ್ತುತ್ತವೆ. ಈ ನಾಟಕ ಕಾವ್ಯವನ್ನು ಓದುವ ಅನುಭವವನ್ನು ನೀಡುತ್ತದೆ.'' (ಸಂಪ್ರತಿ; ಪು. ೨೨೭)

ಆ ಮನೆಯ ಗತ ಕಾಲದ ಸಂಗತಿಗಳನ್ನು ಮುದುಕ ಹಣ್ಣು ಮಾರುವವಳಿಗೆ ಹೇಳುವ ಕತೆಯ ಮೂಲಕವೂ, ವರ್ತಮಾನದ ಸಂಗತಿಗಳನ್ನು ಮಕ್ಕಳ ಪ್ರತ್ಯಕ್ಷ ಆಟದ

ಮೂಲಕವೂ ನಿರೂಪಿಸುವ ತಂತ್ರ ವಿಶಿಷ್ಟವಾಗಿದೆ. ''ಬಳಕೆ ಮಾತಿನ ಅನುಭವ ತೀವ್ರತೆ, ಧ್ವನಿ ಸಾಮರ್ಥ್ಯ, ಸಹಜಲಯ, ನೆಲದ ಕಾವು ಗ್ರಂಥಸ್ಥ ಭಾಷೆಯಲ್ಲಿ ಮೂಡುವದು ಕಠಿಣ'' ('ಆ ಮನಿ' , ಮೊದಲ ಮಾತು; ಪು. ೪) ಎಂಬ ಕಾರಣಕ್ಕಾಗಿ ಉತ್ತರ ಕರ್ನಾಟಕದ ಆಡು ಭಾಷೆಯಲ್ಲೇ ಪ್ರಸ್ತುತ ನಾಟಕವನ್ನು ರಚಿಸಲಾಗಿದೆ. ಒಟ್ಟಿನಲ್ಲಿ ಇದು ಕುರ್ತಕೋಟಿಯವರ ಒಂದು ಯಶಸ್ವೀ ನಾಟಕ ಕೃತಿ.

**೨. ಸ್ವಪ್ನದರ್ಶಿ ಮತ್ತು ಇತರ ಗೀತ ನಾಟಕಗಳು (೧೯೫೬)**

ಸ್ವಪ್ನದರ್ಶಿ, ರಾಮಾವಸಾನ, ಮಹಾಪ್ರಸ್ಥಾನ, ಮಾಹಾಶ್ವೇತೆ, ಮತ್ತು ಶೋಕವೃಕ್ಷ ಎಂಬ ಐದು ಗೀತನಾಟಕಗಳು ಇಲ್ಲಿ ಸಂಕಲಿತವಾಗಿವೆ.

**ಸ್ವಪ್ನದರ್ಶಿ**

'ಜಡಭರತನ ಕನಸುಗಳು' ಕೃತಿಯ ''ಅಶರೀರ ವಾಣಿ'' ಎಂಬ ಕನಸಿನಿಂದ ವಸ್ತುವನ್ನಾಯ್ದುಕೊಂಡು ರಚಿಸಿದ ನಾಟಕವಿದು. ಇಲ್ಲಿನ ನಾಯಕನಾದ ಯುವರಾಜ ಸತ್ಯಕಾಮನು ತಾನು ಕೇಳಿಸಿಕೊಂಡ ಅಶರೀರ ವಾಣಿಯ ಮೇರೆಗೆ ದಿವಾಗ್ನಿಯನ್ನರಸಿ ಹೊರಡುತ್ತಾನೆ. ಆದರೆ ತಾನು ಹೊರಟ ಕಾರ್ಯದಲ್ಲಿ ಸಫಲನಾಗಿ ಆತ ಹಿಂದಿರುಗಬಲ್ಲನೆಂಬ ಕಲ್ಪನೆ ಆತನ ಸ್ವಂತ ಮಗನೂ ಸೇರಿದಂತೆ ಯಾರೊಬ್ಬರಿಗೂ ಇರುವುದಿಲ್ಲ. ಹಾಗಾಗಿಯೇ ಸತ್ಯಕಾಮನ ಮೂರ್ತಿಗೆ ಆತ ಜೀವಂತವಿದ್ದಾಗಲೇ ಜನ ಪೂಜೆ ಮಾಡುತ್ತಾರೆ. ಅದೇ ವೇಳೆಗೆ ಸರಿಯಾಗಿ ದಿವ್ಯಾಗ್ನಿಯನ್ನು ಸಂಪಾದಿಸಿಕೊಂಡು ಬಂದ ಸತ್ಯಕಾಮನ ಬಗ್ಗೆ ಯಾರೂ ವಿಶೇಷ ಆಸ್ಥೆ ವಹಿಸುವುದಿಲ್ಲ ಬಂದ ವ್ಯಕ್ತಿ ಸತ್ಯಕಾಮನಾಗಿರಬಹುದೆಂಬ ಸಂಶಯವೂ ಯಾರಲ್ಲೂ ಸುಳಿಯುವುದಿಲ್ಲ. ಇದು ವ್ಯಕ್ತಿ ಜೀವಂತವಿದ್ದಾಗ ಆತನನ್ನು ತೆಗಳಿ, ಸತ್ತ ಮೇಲೆ ಆತನಿಗೆ ಸ್ಮಾರಕವನ್ನು ಕಟ್ಟಿ ಪೂಜಿಸುವ ನಮ್ಮ ಸಮಾಜದ ಮೌಢ್ಯಕ್ಕಿಂತಲೂ ಭೀಕರವಾದ ಮೌಢ್ಯವೆನ್ನಬೇಕಾಗುತ್ತದೆ. ನಮ್ಮ ಜನತೆಯ ಇಂತಹ ಪ್ರವೃತ್ತಿಯ ಬಗೆಗೆ ನಾಟಕಕಾರರಿಲ್ಲಿ ವ್ಯಂಗ್ಯವಾಡಿದ್ದಾರೆ. ದಿವ್ಯಾಗ್ನಿಯ ಗಳಿಕೆಗಿಂತಲೂ ಆದರ್ಶದ ಆಚರಣೆಗಿಂತಲೂ ಅವುಗಳ ಕಲ್ಪನೆಯಷ್ಟೇ ನಮಗಿಂದು ಸಾಕಾಗಿದೆ- ಎಂಬ ವಾಸ್ತವ ಸತ್ಯವನ್ನು ಬಿಂಬಿಸುವಲ್ಲಿ ನಾಟಕವು ಯಶಸ್ವಿಯಾಗಿದೆ. ನಾಟಕ ಪ್ರಾರಂಭಕ್ಕೆ ಮುನ್ನ ನಾಟಕಕಾರರೇ ಹೇಳಿದಂತೆ '' ಕನಸಿನ ಕನ್ನಡಿಯಲ್ಲಿ ನಿಜಜೀವನದ ಚಿತ್ರವನ್ನು ಕಾಣಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಮನುಕುಲದ ಹೃದಯದಲ್ಲಿ ಆದರ್ಶ ಜೀವನದ ಕನಸು ಸಾವಿರ ಸಲ ಸುಳಿದು ಹೋಗಿದೆ. ಆದರೆ ಅದು ನಿಜಜೀವನದಲ್ಲಿ ಮೂಡಿದಾಗ ದೆವ್ವವನ್ನು ಕಂಡಂತೆ ಜನ ಹೆದರುತ್ತಾರೆ....... ಕ್ರಿಸ್ತನಂಥವರು ಜನತೆಯ ರೋಷಕ್ಕೆ ಬಲಿಯಾಗುತ್ತಾರೆ. ಸತ್ಯಕಾಮನಂಥವರು ತಾವೇ ಸಾವಿಗೆ ಬಲಿಯಾಗುತ್ತಾರೆ. ಆದರ್ಶಪ್ರಾಯ ಸಮಾಜ ಅವರ ಸ್ಮಾರಕವನ್ನು ನಿರಂತರವಾಗಿ ಪೂಜಿಸುತ್ತಲೇ ನಡೆದಿದೆ.'' (ಸ್ವ. ಇ. ಗೀ. ನಾ.; ಪು. ೧) ಇದುವೇ ಪ್ರಸ್ತುತ ನಾಟಕದಲ್ಲಿ ಬಿಂಬಿತವಾಗುವ ಪ್ರಮುಖ ಅಂಶವಾಗಿದೆ.

ನಾಟಕದ ಮುಖ್ಯ ಘಟನೆಗೆ ಪೂರಕವಾಗಿರುವ ಇತರ ಘಟನೆಗಳು ಇನ್ನಷ್ಟು ವಿವರಣೆಯನ್ನು ಬಯಸುತ್ತವೆ. ಉದಾಹರಣೆಗೆ ಸತ್ಯಕಾಮನಿಗೆ ದಿವ್ಯಾಗ್ನಿಯನ್ನರಸಿ ಹೊರಡಲು ಸಿಗುವ ಪ್ರೇರಣೆ, ಅದು ಲಭ್ಯವಾಗುವ ಸನ್ನಿವೇಶ-ಇವೆಲ್ಲ ಸ್ವಲ್ಪ ವಿಸ್ತಾರ ಗೊಂಡಿದ್ದರೆ ಚೆನ್ನಾಗಿತ್ತೆಂದೆನಿಸುತ್ತದೆ. ಎಂತಿದ್ದರೂ ನಾಟಕಕಾರರಿಗಿಲ್ಲಿ ನಂತರದ ವಿಪರ್ಯಾಸವನ್ನು - ವ್ಯಂಗ್ಯವನ್ನು, ಅದೇ ರೀತಿ ಸತ್ಯಕಾಮನ ಒಳತೋಟಿಯನ್ನು ಅಭಿವ್ಯಕ್ತಪಡಿಸುವುದಷ್ಟೇ ಮುಖ್ಯವಾಗಿತ್ತೆಂದು ತೋರುತ್ತದೆ. ಆ ಕಾರ್ಯದಲ್ಲಿ ಕುರ್ತಕೋಟಿಯವರಿಲ್ಲಿ ಸಫಲರಾಗಿದ್ದಾರೆ.

## ರಾಮಾವಸಾನ

''ಕೊನೆಗಾಲದಲ್ಲಿಯ ರಾಮಚಂದ್ರನ ಮಾನವತೆ ಹಾಗೂ ಅಲೌಕಿಕತೆಗಳೇ ಈ ಕೃತಿಗೆ ಸ್ಫೂರ್ತಿಯನ್ನಿತ್ತಿವೆ'' ಯೆಂದು ಸ್ವತಃ ನಾಟಕಕಾರರೇ ಹೇಳಿಕೊಂಡಿದ್ದಾರೆ. ಅವರೇ ಹೇಳುವಂತೆ ಇಲ್ಲಿ 'ರಾಮನ ಮಾನವೀಯತೆ ಹಾಗೂ ದೈವಿಕತೆಗಳ ಫಲವಾಗಿ ಉಂಟಾದ ನೋವು' ಅಭಿವ್ಯಕ್ತಗೊಂಡಿದೆ. ಇಲ್ಲಿ 'ಮಾನವೀಯತೆ' ಎಂಬುದನ್ನು ಅವರು ಮಾನವತೆ (ಮನುಷ್ಯ ಸಹಜ ಪ್ರವೃತ್ತಿ-ಮಾನುಷತೆ) ಎಂಬರ್ಥದಲ್ಲಿ ಬಳಸಿರಬೇಕು. ಈ ನಾಟಕದುದ್ದಕ್ಕೂ ರಾಮನು ಓರ್ವ ದೈವವಾಗದೆ (ದೇವರಾಗದೆ) ಸಾಮಾನ್ಯ ಮಾನವನಾಗಿಯೇ ಕಂಡುಬರುತ್ತಾನೆ. ಮಾನವ ಸಹಜವಾದ ಎಲ್ಲಾ ನೋವು-ನಲಿವುಗಳೂ ಆತನಿಗಿವೆ. ಪ್ರಸ್ತುತ ನಾಟಕವಂತೂ ನಲಿವಿಗಿಂತಲೂ ಹೆಚ್ಚಾಗಿ ನೋವಿನ ಸನ್ನಿವೇಶಗಳಿಂದಲೇ ಕೂಡಿದೆಯೆನ್ನ ಬಹುದು. ಲೋಕಾಪವಾದಕ್ಕಂಜಿ ತುಂಬು ಗರ್ಭಿಣಿ ಸೀತೆಯನ್ನು ಕಾಡಿಗಟ್ಟುವ ಸನ್ನಿವೇಶವಾಗಲಿ, ನಂತರದಲ್ಲಿ ಪರಿಗ್ರಹಣಕ್ಕೊಲ್ಲದೆ ಆಕೆ ತನ್ನ ತಾಯೊಡಲನ್ನು ಸೇರಿಕೊಳ್ಳುವ ಸನ್ನಿವೇಶವಾಗಲಿ, ಕಾಲನೊಂದಿಗಿನ ಸಂವಾದವಾಗಲಿ, ಲಕ್ಷ್ಮಣನ ಅಗಲುವಿಕೆಯಾಗಲಿ- ಇವೆಲ್ಲಾ ರಾಮನ ಮನಸ್ಸಿಗೆ ಅತೀವ ನೋವನ್ನುಂಟು ಮಾಡುತ್ತವೆ; ಆತನ ಮಾನವತೆ ಪ್ರಕಟವಾಗುವುದು ಇಲ್ಲಿಯೇ.

## ಮಹಾಪ್ರಸ್ಥಾನ

ಹೆಚ್ಚು ಕಡಿಮೆ 'ರಾಮಾವಸಾನ' ನಾಟಕವು ಧ್ವನಿಸುವ ಅಂಶವನ್ನೇ ಈ ನಾಟಕವೂ ಧ್ವನಿಸುತ್ತದೆ. ಕೃಷ್ಣ ಮತ್ತು ಪಾಂಡವರ ಅವಸಾನವನ್ನು ಚಿತ್ರಿಸುವ ನಾಟಕವಿದು. ನಾಟಕಕಾರರಿಗಿಲ್ಲಿ 'ಯುಧಿಷ್ಠಿರನ ಶ್ರದ್ಧೆ ಹಾಗೂ ಅನಿವಾರ್ಯವನ್ನೆದುರಿಸುವ ಧೈರ್ಯ'- ಇವುಗಳನ್ನು ಅಭಿವ್ಯಕ್ತಪಡಿಸುವ ಉದ್ದೇಶವಿತ್ತೆಂಬುದು ಅವರ ಮೊದಲ ಮಾತಲ್ಲಿ ಸ್ಪಷ್ಟವಾಗುತ್ತದೆ. 'ರಾಮಾವಸಾನ' ಮತ್ತು 'ಮಹಾಪ್ರಸ್ಥಾನ' ನಾಟಕಗಳನ್ನು ನೋಡಿದರೆ ಮಹಾತ್ಮರೆನಿಸಿದವರ , ಅವತಾರ ಪುರುಷರೆನಿಸಿದವರ ಅಂತ್ಯ ತೀರಾ ಸಾಮಾನ್ಯ ರೀತಿಯಲ್ಲಾಗುವುದನ್ನು ನಾವು ಮನಗಾಣಬಹುದು.

**ಮಹಾಶ್ವೇತೆ**

ಬಾಣ ಕಾದಂಬರಿಯಲ್ಲಿ ಬರುವ ಮಹಾಶ್ವೇತೆ ಮತ್ತು ಪುಂಡರೀಕರ ಪ್ರಣಯ ವೃತ್ತಾಂತವು ಈ ನಾಟಕಕ್ಕೆ ವಸ್ತುವಾಗಿದೆ. ಅವರಿಬ್ಬರ ಪ್ರೀತಿಯ ಅನನ್ಯತೆಯನ್ನು ತಿಳಿಯಪಡಿಸುವುದೇ ನಾಟಕಕಾರರ ಉದ್ದೇಶವಾಗಿದೆ. ಮಹಾಶ್ವೇತೆಯು ತನ್ನ ಪ್ರಿಯಕರನಾದ ಪುಂಡರೀಕನ ಅಕಾಲ ಮರಣವನ್ನು ಕಂಡು ಶೋಕ ಭರದಿಂದ ಮೂರ್ಛೆ ಹೋಗುವ ಹೃದಯ ವಿದ್ರಾವಕ ಸನ್ನಿವೇಶದಲ್ಲಿ ನಾಟಕವು ಕೊನೆಗಾಣುತ್ತದೆ.

**ಶೋಕವೃಕ್ಷ**

ಏಸುವಿನ ಅವಸಾನದ ಸನ್ನಿವೇಶವನ್ನು ಚಿತ್ರಿಸುವ ನಾಟಕವಿದು. ಗೋವಿಂದ ಪೈಯವರ 'ಗೊಲ್ಗೊಥಾ' ಅಥವಾ 'ಏಸುವಿನ ಕೊನೆಯ ದಿನ' ಎಂಬ ಖಂಡ ಕಾವ್ಯವನ್ನು ನೆನಪಿಗೆ ತರುವಂತಹುದು. ಅಲ್ಲಿನ ಕಾವ್ಯಸತ್ವವನ್ನು ಇಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲವಾದರೂ ಗೀತನಾಟಕವಾಗಿ ಹೆಸರಿಸಬೇಕಾದ ಕೃತಿಯಿದು. ಕುರ್ತಕೋಟಿಯವರು ಶಿಲುಬೆಗೆ ಇಲ್ಲಿ 'Tree of Sorrow' ದ ನೇರ ಭಾಷಾಂತರವಾಗಿ ಬಳಸಿದ 'ಶೋಕವೃಕ್ಷ'ಕ್ಕಿಂತ ಪೈಯವರು ಬಳಸಿದ 'ಮರಣ ವೃಕ್ಷ' ಎಂಬ ಪದ ಹೆಚ್ಚು ಅರ್ಥಪೂರ್ಣವಾಗಿದೆ. ಅದೇ ರೀತಿ 'ಮರಣ ವೃಕ್ಷದೊಳಮೃತ ಫಲದಂತೆ ತೂಗುತಿರೆ' ಎಂಬಲ್ಲಿನ ಗೋವಿಂದ ಪೈಗಳ ಉಪಮೆ ಕುರ್ತಕೋಟಿಯವರ ''ಶೋಕ ವೃಕ್ಷದ ತುದಿಗೆ ಬಾಗಿದ್ದ ಜೀವಫಲ'' ಎಂಬುದಕ್ಕಿಂತ ಹೆಚ್ಚು ಭಾವಪೂರ್ಣವೂ ಪರಿಣಾಮಕಾರಿಯೂ ಆಗಿದೆ. ಎಂತಿದ್ದರೂ ಜೀಸಸ್‌ನ ಕರುಣೆಯನ್ನು ಚಿತ್ರಿಸಬೇಕೆಂಬ ನಾಟಕಕಾರರ ಉದ್ದೇಶ ಇಲ್ಲಿ ಯಶಸ್ವಿಯಾಗಿದೆಯೆನ್ನಬಹುದು. ಈ ಸಂಕಲನದ ಐದೂ ನಾಟಕಗಳಿಗೂ ಅವಸಾನದ ಸನ್ನಿವೇಶಗಳೇ ವಸ್ತುಗಳಾಗಿವೆ. ನಾಲ್ಕು ಕಡೆ ಮಹಾತ್ಮರ ಅವಸಾನವಿದ್ದರೆ, 'ಮಹಾಶ್ವೇತೆ' ನಾಟಕದಲ್ಲಿ ಪ್ರಣಯಿಗಳಿಬ್ಬರ ದಾರುಣ ಅಂತ್ಯದ ಚಿತ್ರಣವಿದೆ. ಒಟ್ಟು ನಾಟಕಗಳ ಸಂಭಾಷಣೆಗಳೆಲ್ಲ ಸರಳ ರಗಳೆಯಲ್ಲಿದ್ದು ಮೇಳಗೀತೆಗಳು ಹಾಡುವುದಕ್ಕೆ ಯೋಗ್ಯವಾಗುವಂತೆ ರಚನೆಯಾಗಿವೆ. ಈ ಮಟ್ಟು ಆಧುನಿಕ ಗೀತನಾಟಕಗಳಿಗೆ ಸರಿಯಾಗಿ ಒಪ್ಪುತ್ತದೆ.

**೩. ಚಂದ್ರ ಗುಪ್ತ (೧೯೮೩)**

ಮೈಸೂರು ವಿಶ್ವವಿದ್ಯಾನಿಲಯದ ಪದವಿ ತರಗತಿಗಳಿಗೆ ಪಠ್ಯವಾಗಿದ್ದ ಈ ಕೃತಿ ಕುರ್ತಕೋಟಿಯವರ ಪ್ರಕಟಿತ ಸ್ವತಂತ್ರ ನಾಟಕಗಳಲ್ಲಿ ಬಹುಶಃ ಮೂರನೆಯದು. ಹೊಸಗನ್ನಡ ಗದ್ಯದಲ್ಲಿ ಬರೆದ ಐತಿಹಾಸಿಕ ನಾಟಕವಿದು. ನಾಟಕಕಾರರು ತಮ್ಮ ಕೃತಿಯ ಬಗ್ಗೆ ಹೀಗೆ ಹೇಳುತ್ತಾರೆ: ''ನನ್ನ ಈ ನಾಟಕಕ್ಕೆ ವಿಶಾಖದತ್ತರ ಮುದ್ರಾರಾಕ್ಷಸದ ಋಣ ಬಹಳ ಇದೆ. ಸಂಸ್ಕೃತದಲ್ಲಿಯ ಶ್ರೇಷ್ಠ ನಾಟಕಗಳಲ್ಲಿ ಅದು ಒಂದಾಗಿದ್ದರೂ ಅನೇಕ ರೀತಿಗಳಲ್ಲಿ ಅದೊಂದು ವಿಶಿಷ್ಟವಾದ ಪ್ರಯೋಗವಾಗಿದೆ. ನನ್ನ ಈ ನಾಟಕದಲ್ಲಿ ಏನಾದರೂ ಭಿನ್ನತೆಯಿದ್ದರೆ ಅದು ಚಂದ್ರಗುಪ್ತನ ಪಾತ್ರ ರಚನೆಯಲ್ಲಿ ಮತ್ತು

ದುರ್ಧರೆಯಂಥ ಹೊಸ ಪಾತ್ರವನ್ನು ಸೃಷ್ಟಿಸುವುದರಲ್ಲಿ. ಚಂದ್ರಗುಪ್ತ ಸೆಲ್ಯೂಕಸನ ಮಗಳನ್ನು ಮದುವೆಯಾಗಿದ್ದ ಎಂಬ ಸಂಗತಿ ಕೂಡ ಇಂದು ಐತಿಹಾಸಿಕವಾಗಿ ವಾದಗ್ರಸ್ತವಾದ ವಿಷಯವಾಗಿದೆ. ಆದರೆ ನನ್ನ ನಾಟಕದ ಉದ್ದೇಶಕ್ಕಾಗಿ ದುರ್ಧರೆಯಂಥ ಪಾತ್ರದ ಅವಶ್ಯಕತೆ ಬಹಳವಾಗಿತ್ತು. ರಾಜಕೀಯದ ನಕ್ರಗ್ರಹಣದಿಂದ ಪಾರಾಗುವ ಅವನ ಹವಣಿಕೆಯೇ ನಾಟಕದ ವಸ್ತುವಾಗಿದೆಯೆಂದರೂ ತಪ್ಪಿಲ್ಲ. ಚಂದ್ರ ಗುಪ್ತನ ವ್ಯಕ್ತಿತ್ವದ ವಿಕಾಸಕ್ಕೆ ಮೂಲ ಸಂಸ್ಕೃತ ನಾಟಕದಲ್ಲಿ ಅಷ್ಟೊಂದು ಇಂಬು ದೊರೆತಿಲ್ಲ. ನನ್ನ ಈ ನಾಟಕದಲ್ಲಿ ಈ ಪ್ರಕ್ರಿಯೆಗೆ ಮಹತ್ವ ಬಂದಿದೆಯೆಂದು ನನ್ನ ತಿಳುವಳಿಕೆಯಾಗಿದೆ.'' (ಚಂದ್ರ ಗುಪ್ತ ; ಮೊದಲ ಮಾತು; ಪು. iv)

ಈ ಮಾತುಗಳಿಂದ ನಾಟಕದ ಸ್ವರೂಪವೇನೆಂಬುದು ಸ್ಪಷ್ಟವಾಗುತ್ತದೆ. ಆದರೆ ಹಾ. ಮಾ. ನಾಯಕರಂದಂತೆ ``ಕುರ್ತಕೋಟಿಯವರ ಮೊದಲ ನಾಟಕದ ಎತ್ತರಕ್ಕೆ ಇದು ಖಂಡಿತ ಏರುವುದಿಲ್ಲವೆಂಬುದು ನಿಜ. ನಾಟಕವನ್ನು ಬೆಳೆಸುವುದರಲ್ಲಿ ಕಲ್ಪನೆಯ ವಿಳಾಸವೇನೂ ಕಾಣುವುದಿಲ್ಲ. ಹೊಸ ಪಾತ್ರದ ನಿರ್ಮಾಣದಿಂದ ಹೆಚ್ಚಿನದೇನನ್ನೂ ಸಾಧಿಸಲಾಗಿಲ್ಲ.'' (ಸಂಪ್ರತಿ; ಪು. ೨೨೬) ನಾಟಕದ ಹೆಸರು 'ಚಂದ್ರ ಗುಪ್ತ' ಎಂದಿದ್ದರೂ ಆತನ ಇಡಿಯ ಜೀವನ ಚಿತ್ರಣ ಇಲ್ಲಿಲ್ಲ. ರಾಜಕೀಯದಲ್ಲಿ ಇನ್ನೂ ಸರಿಯಾಗಿ ಪಳಗಿರದ ಚಂದ್ರಗುಪ್ತನು ಚಾಣಕ್ಯನ ಚಾಣಾಕ್ಷತೆಯಿಂದ ರಾಜ್ಯಸೂತ್ರವನ್ನು ಕೈಗೊಳ್ಳುವ ಸನ್ನಿವೇಶವು ಪ್ರಸ್ತುತ ನಾಟಕಕ್ಕೆ ವಸ್ತುವಾಗಿದೆ. ಚಾಣಕ್ಯನ ರಾಜನೀತಿಯೂ ಇಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತದೆ. ಆತನ ಭೇದೋಪಾಯದಿಂದಲಾಗಿಯೇ ರಾಕ್ಷಸನು ಚಂದ್ರಗುಪ್ತನಿಗೆ ಅಮಾತ್ಯನಾಗಿ ದೊರೆತು, ರಾಜಕೀಯ ಸಮಸ್ಯೆ ಬಗೆಹರಿಯುವುದನ್ನು ನಾವಿಲ್ಲಿ ಗಮನಿಸಬಹುದು. ಇದು ನಾಟಕದ ಬಹಳ ಮುಖ್ಯವಾದ ತಿರುವೂ ಹೌದು.

# ವಿಮರ್ಶಾ ಕೃತಿಗಳು

ಕೀರ್ತಿನಾಥ ಕುರ್ತಕೋಟಿಯವರು ವಿಮರ್ಶಕರಾಗಿ ರೂಪುಗೊಂಡುದರ ಹಿನ್ನೆಲೆಯನ್ನು ಅವರ ಮಾತಿನಿಂದಲೇ ಕಂಡುಕೊಳ್ಳುವುದು ಸಮಂಜಸ. ''ನಾನು ಸಾಹಿತ್ಯ ವಿಮರ್ಶೆಗೆ ತೊಡಗಿದ್ದು ೧೯೫೮ರಲ್ಲಿ. ಮನೋಹರ ಗ್ರಂಥ ಮಾಲೆ ತನ್ನ ಬೆಳ್ಳಿ ಹಬ್ಬದ ನೆನಪಿಗಾಗಿ 'ನಡೆದು ಬಂದ ದಾರಿ' ಸಂಪುಟಗಳನ್ನು ಪ್ರಕಟಿಸಬೇಕೆಂದು ನಿರ್ಣಯಿಸಿದಾಗ. ಅದಕ್ಕಿಂತ ಮೊದಲು ನಾನು ವಿಮರ್ಶೆಯೆಂದರೆ ಹಿಂಜರಿಯುತ್ತಿದ್ದೆ. ಕವಿತೆ, ನಾಟಕ, ಮತ್ತು ಹರಟೆಗಳನ್ನು ಬರೆಯುತ್ತಿದ್ದೆ. ನಾನು ಒಮ್ಮಿಂದೊಮ್ಮೆಲೆ ಸಾಹಿತ್ಯ ವಿಮರ್ಶೆಗೆ ಧುಮುಕಿ ಬಿಟ್ಟೆ. ಒಂದು ನಿಮಿತ್ತಕ್ಕಾಗಿ ವೇಷ ಕಟ್ಟಿದ ಮೇಲೆ ಆ ಪಾತ್ರ ಸ್ಥಿರವಾಗಿ ನನಗೆ ಅಂಟಿಕೊಂಡು ಬಿಟ್ಟಿದೆ.'' ('ಸಂಸ್ಕೃತಿ ಸ್ಪಂದನ'. ಪು. ೧)

''ವಿಮರ್ಶೆಯ ಆ ಮೊದಲ ಸಾಹಸ ನನ್ನ ಮಟ್ಟಿಗೆ ಹೇಳುವುದಾದರೆ ಸೃಜನಶೀಲವಾಗಿತ್ತು. ಬಾಲ್ಯದಿಂದ ನನ್ನೊಳಗೆ ತುಂಬಿಕೊಂಡಿದ್ದ ಸಾಹಿತ್ಯಿಕ ಅನುಭವಕ್ಕೆ ಒಂದು ಅಭಿವ್ಯಕ್ತಿಯನ್ನು ಕೊಡುವ ಪ್ರಕ್ರಿಯೆ ಆ ಬರವಣಿಗೆಯಲ್ಲಿದೆ.'' (ಅದೇ) ''ನಾನು ಬೆಳೆದು ಬಂದದ್ದೇ ಬೇಂದ್ರೆಯವರ ಕಾವ್ಯದ ಉದ್ದೀಪಕ ವಾತಾವರಣದಲ್ಲಿ. ನನ್ನ ವಿಮರ್ಶೆಯ ಪ್ರಜ್ಞೆ ಮೂಡಿ ಬಂದದ್ದು ಈ ಕಾವ್ಯದಿಂದ'' ( ಬಾರೋ ಸಾಧನ ಕೇರಿಗೆ; ಲೇಖಕರ ನುಡಿ). ಕುರ್ತಕೋಟಿಯವರು ಓರ್ವ ವಿಮರ್ಶಕರಾಗಿ ಬೆಳೆಯಲು ಬೇಂದ್ರೆ- ಅವರ ಕಾವ್ಯ ಮತ್ತು ಮನೋಹರ ಗ್ರಂಥಮಾಲೆಯ ಜಿ. ಬಿ. ಜೋಶಿಯವರು ಎಷ್ಟರ ಮಟ್ಟಿಗೆ ಕಾರಣೀಭೂತರಾಗಿದ್ದಾರೆಂಬುದನ್ನು ಮೇಲಿನ ಅವರ ಮಾತುಗಳೇ ಶ್ರುತಪಡಿಸುತ್ತವೆ.

ಕೀರ್ತಿನಾಥರು ಯಾವುದೇ ಒಂದು ನಿರ್ದಿಷ್ಟ ಸಾಹಿತ್ಯ ಪ್ರಕಾರಕ್ಕೆ ಅಂಟಿಕೊಂಡವರಲ್ಲ. ಸಂಸ್ಕೃತ ಸಾಹಿತ್ಯ, 'ಪ್ರಾಚೀನ ಕನ್ನಡ ಕಾವ್ಯ', ಆಧುನಿಕ ಕಾವ್ಯ, ನಾಟಕ, ಕತೆ- ಕಾದಂಬರಿ, ವಿಮರ್ಶೆ- ಇವೆಲ್ಲವುಗಳ ಬಗೆಗೂ ಅವರು ಬರೆದಿದ್ದಾರೆ. ಇಂಗ್ಲಿಷ್, ಮರಾಠಿ, ಗುಜರಾಥಿ ಮುಂತಾದ ಸಾಹಿತ್ಯಗಳ ಕುರಿತೂ ಸತ್ವಯುತವಾಗಿ ಮಾತನಾಡುತ್ತಾರೆ; ಬರೆಯುತ್ತಾರೆ. ಈ ಹಿನ್ನೆಲೆಯ ಮಾತುಗಳೊಂದಿಗೆ ಕುರ್ತಕೋಟಿಯವರ ವಿಮರ್ಶಾ ಕೃತಿಗಳ ಅವಲೋಕನವನ್ನಿಲ್ಲಿ ಮಾಡಲಾಗುವುದು.

### ೧ . ಯುಗಧರ್ಮ ಹಾಗೂ ಸಾಹಿತ್ಯ ದರ್ಶನ (೧೯೬೨)

ಕೀರ್ತಿನಾಥ ಕುರ್ತಕೋಟಿಯವರನ್ನು ವಿಮರ್ಶಕರೆಂದು ಕನ್ನಡ ಸಾಹಿತ್ಯಲೋಕಕ್ಕೆ ಪರಿಚಯಿಸಿಕೊಟ್ಟ ಕೃತಿಯಿದು. ಈ ಪ್ರಥಮ ವಿಮರ್ಶಾ ಕೃ‌ಯೊಂದರಿಂದಲೇ ಶ್ರೇಷ್ಠ

ವಿಮರ್ಶಕರೆಂಬ ಕೀರ್ತಿಗೆ ಅವರು ಪಾತ್ರರಾಗಿದ್ದಾರೆ. ೧೯೫೪ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯ ಬೆಳ್ಳಿಹಬ್ಬದ ಸವಿನೆನಪಿಗಾಗಿ ಹೊರತರಲಾದ 'ನಡೆದು ಬಂದ ದಾರಿ' ಯ ಮೂರು ಸಂಪುಟಗಳಲ್ಲಿ ''ಇತಿಹಾಸ ಪ್ರಬಂಧ''ಗಳಾಗಿ ಮೊದಲು ಪ್ರಕಟಗೊಂಡ ಪ್ರೌಢ, ಪ್ರದೀರ್ಘ ಲೇಖನಗಳಿವು. ಆಗಿನ್ನೂ ಕುರ್ತಕೋಟಿಯವರಿಗೆ ಮೂವತ್ತರ ಎಳೆ ಹರೆಯ. ಆ ವೇಳೆಗಾಗಲೇ ಅವರು ಗಳಿಸಿಕೊಂಡಿದ್ದ ಜ್ಞಾನ, ಸಾಹಿತ್ಯಾನುಭವ, ಭಾಷೆಯ ಮೇಲೆ ಅವರಿಗಿದ್ದ ಹಿಡಿತ, ಓದಿನ ಹರಹು ನಮಗೆ ಅಚ್ಚರಿಯನ್ನುಂಟುಮಾಡುತ್ತವೆ.

ಈ ಗ್ರಂಥದಲ್ಲಿನ ''ಯುಗಧರ್ಮ ಹಾಗೂ ಸಾಹಿತ್ಯ ವಿಕಾಸ'' ಎಂಬ ಪ್ರಾರಂಭದ ಲೇಖನವು ಇಲ್ಲಿನ ಇತಿಹಾಸ ಪ್ರಬಂಧಗಳಿಗೆಲ್ಲಾ ಪೀಠಿಕೆಯಂತಿದೆ. ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗಿನ ಕನ್ನಡ ಸಾಹಿತ್ಯದ ಎಲ್ಲಾ ಪ್ರಮುಖ ಮಜಲುಗಳನ್ನು ಗುರುತಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ಮುಂದಿನ ಪ್ರಬಂಧಗಳಲ್ಲಿ ಕ್ರಮವಾಗಿ ಹೊಸ ಗನ್ನಡ ಸಾಹಿತ್ಯದ ಮುಖ್ಯ ಪ್ರಕಾರಗಳಾದ ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ ಹಾಗೂ ಸಾಹಿತ್ಯ ವಿಮರ್ಶೆಗಳ ವಿಮರ್ಶಾತ್ಮಕ ಇತಿಹಾಸವಿದೆ. ಪ್ರತಿಯೊಂದು ಪ್ರಕಾರದ ಪ್ರಾತಿನಿಧಿಕ ಸಾಹಿತಿಗಳ ಬಗೆಗೂ, ಕೃತಿಗಳ ಬಗೆಗೂ ವಿಸ್ತೃತವಾದ ಚರ್ಚೆಯಿದೆ. ಜೀವನ ಚರಿತ್ರೆ, ಲಲಿತ ಪ್ರಬಂಧಗಳಂಥ ಪ್ರಕಾರಗಳು ಆ ವೇಳೆಗಿನ್ನೂ ಹುಲುಸಾಗಿ ಬೆಳೆಯದಿದ್ದುದರಿಂದಲೋ ಏನೋ ಅವುಗಳ ಬಗೆಗಿನ 'ದರ್ಶನ' ಇಲ್ಲಿಲ್ಲ. ಕಾವ್ಯವನ್ನು ಕುರಿತ ಇಲ್ಲಿನ ಪ್ರಬಂಧದಲ್ಲಿ 'ಭಾವಗೀತದ ಉದಯ', 'ದೇಶಾಭಿಮಾನದ ಪ್ರೇರಣೆ', 'ಭಾವಗೀತದ ರೂಪ ಲಕ್ಷಣಗಳು', 'ಶಬ್ದ ಸೃಷ್ಟಿ', ' ಛಂದಸ್ಸು', 'ಕೆಲವು ಪ್ರಮುಖರಾದ ಹೊಸ ಕವಿಗಳು', 'ಮಹಾಕಾವ್ಯ', 'ಕಾವ್ಯದಲ್ಲಿ ಪ್ರಗತಿಶೀಲತೆ' ಹಾಗೂ 'ನವ್ಯ ಮಾರ್ಗ' ಎಂಬ ಉಪವಿಭಾಗಗಳಿವೆ. ನಾಟಕಗಳನ್ನು ಸಾಮಾಜಿಕತೆಯ ಅರಿವು, ಐತಿಹಾಸಿಕ ನಾಟಕ, ನಾಟಕದಲ್ಲಿ ಪೌರಾಣಿಕತೆ, ಏಕಾಂಕಗಳು, ಇನ್ನು ಮುಂದೆ - ಎಂಬ ಉಪಶೀರ್ಷಿಕೆಗಳಲ್ಲಿ ಅಧ್ಯಯನ ಮಾಡಲಾಗಿದೆ. ಸಣ್ಣಕತೆಯನ್ನು ಕುರಿತ ಪ್ರಬಂಧದಲ್ಲಿ ಪಂಜೆಯವರಿಂದ ಪ್ರಾರಂಭವಾಗಿ ಪ್ರಗತಿಶೀಲದ ವರೆಗಿನ ವಿಸ್ತೃತ ಚರ್ಚೆ ಯಾವುದೇ ಉಪಶೀರ್ಷಿಕೆಯಿಲ್ಲದೆ ಸಾಗುತ್ತದೆ. ನಂತರದಲ್ಲಿ 'ಪ್ರಗತಿಶೀಲತೆ' ಮತ್ತು 'ಹೊಸಕತೆಗಾರರು' ಎಂಬೆರಡು ವಿಭಾಗಗಳ ಮೂಲಕ ಸಣ್ಣಕತೆಗಳ ಬಗೆಗಿನ ಚರ್ಚೆ ಮುಂದುವರಿಯುತ್ತದೆ. ಕಾದಂಬರಿ ಬಗೆಗಿನ ಇತಿಹಾಸ ಪ್ರಬಂಧದಲ್ಲಿ ಹಿನ್ನೆಲೆ, ವಾಸ್ತವ ಮಾರ್ಗ: ಅನಕೃ, ಸಾಮಾಜಿಕತೆಯ ಅರಿವು: ಕಾರಂತ, ಕೌಟುಂಬಿಕತೆ, ಬುದ್ಧಿಯ ವಿಲಾಸ, ಕಾನೂರು ಸುಬ್ಬಮ್ಮ ಹೆಗ್ಗಡತಿ, ಸಮರಸವೇ ಜೀವನ, ಸಾಮಾಜಿಕತೆಯ ಇನ್ನೊಂದು ಹೆಜ್ಜೆ, ವಿನೋದ ಪರತೆ, ಐತಿಹಾಸಿಕ ಕಾದಂಬರಿಗಳು, ಮಾಸ್ತಿಯವರ ' ಚೆನ್ನ ಬಸವನಾಯಕ', ಇತರ ಪ್ರಯೋಗಗಳು, ಕೆಲವು ಹೊಸ ಕಾದಂಬರಿಗಳು ಇತ್ಯಾದಿ ಉಪವಿಭಾಗಗಳಿವೆ. ಸಾಹಿತ್ಯ ವಿಮರ್ಶೆ ಆಗಿನ್ನೂ ಶೈಶವಾವಸ್ಥೆಯಲ್ಲಿದ್ದುದರಿಂದಲೋ ಏನೋ ತತ್ಸಂಬಂಧವಾದ ಇತಿಹಾಸ ಪ್ರಬಂಧದಲ್ಲಿ ಕುರ್ತಕೋಟಿಯವರು ಉಪ ವಿಭಾಗಗಳೇನನ್ನೂ ಮಾಡಿಕೊಂಡಿಲ್ಲ. ಗಮನಾರ್ಹವೆನ್ನಬಹುದಾದ ಅವಸ್ಥಾಂತರ

ಗಳೇನನ್ನೂ ಸಾಹಿತ್ಯ ವಿಮರ್ಶೆ ಆ ವೇಳೆಗೆ ಪಡೆಯದಿದ್ದುದೇ ಇದಕ್ಕೆ ಕಾರಣವಿದ್ದರೂ ಇರಬಹುದು.

ಇಡಿಯ ಕೃತಿಯಲ್ಲಿ ಮೌಲಿಕವೂ, ವಿಚಾರಯೋಗ್ಯವೂ ಆದ ಹಲವು ಹೇಳಿಕೆಗಳಿವೆ; ತೀರ್ಮಾನಗಳಿವೆ: ‘‘ ಒಂದು ಯುಗ ತನಗೆ ತಕ್ಕ ಸಾಹಿತ್ಯವನ್ನು ಪಡೆಯುತ್ತದೆಂಬ ಮಾತಿನಂಥ ಅಸತ್ಯದ ಮಾತು ಬೇರೊಂದಿಲ್ಲ ’’ (ಪು. ೫೦), ‘‘ಹೊಸಗನ್ನಡದ ಪ್ರಾರಂಭದ ಕವಿಗಳು ಹೊಸ ದಾರಿಯನ್ನು ಹಿಡಿಯುವುದು ಐತಿಹಾಸಿಕ ಅವಶ್ಯಕತೆಯಾಗಿತ್ತು’’ (ಪು. ೧೨೬-೧೨೭), ‘‘ಸಣ್ಣ ಕತೆ ಹಾಗೂ ಭಾವಗೀತೆಗಳಂತೆ ಏಕಾಂಕದ ರೂಪ, ಬೀಜಕ್ಕೆ ಬಿಡುವ ಹಣ್ಣನ್ನು ಹೀಚಿನಲ್ಲಿ ಕಾಣಿಸುವ ಹೊಸ ಪ್ರಯತ್ನವಾಗಿದೆ’’ ( ಪು. ೧೮೦), ‘‘....ಪ್ರಗತಿಶೀಲತೆ ಸಾಹಿತ್ಯವನ್ನು ಪ್ರಚಾರದ ಮಾಧ್ಯಮವನ್ನಾಗಿ ಮಾಡಿತು’’ (ಪು. ೨೨೨) , ‘‘..... ಈ ಕಾದಂಬರಿ (ಕಾನೂರು ಸುಬ್ಬಮ್ಮ ಹೆಗ್ಗಡತಿ) ತನ್ನ ಕಾಲಕ್ಕಿಂತ ಮೊದಲೇ ಹುಟ್ಟಿ ಬಿಟ್ಟಿತು (ಪು. ೩೦೩), ‘‘......ಈ ಕಾದಂಬರಿ (ಕಾನೂರು ಸುಬ್ಬಮ್ಮ ಹೆಗ್ಗಡತಿ) ಕನ್ನಡ ಕಾದಂಬರಿಯ ಪ್ರಗತಿಗೆ ಸೀಮಾರೇಖೆಯಾಗಿದೆ’’ (ಅದೇ), ‘‘ಕಾದಂಬರಿ ಆಧುನಿಕ ಯುಗದ ಮಹಾ ಕಾವ್ಯವೆಂಬ ಸತ್ಯವನ್ನು ಈ ಕಾದಂಬರಿ (ಕಾನೂರು ಸುಬ್ಬಮ್ಮ ಹೆಗ್ಗಡತಿ) ಮೂಲಕ ಅನುಭವಿಸ ಬಹುದಾಗಿದೆ’’ (ಪು. ೩೦೪) ‘‘ವಿಮರ್ಶೆ ಅಮೂರ್ತವಾದದ್ದು; ಅದರ ಗುರಿ ಸತ್ಯಾನ್ವೇಷಣೆ, ಆದರೆ ಸತ್ಯ ಸಾಹಿತ್ಯದಲ್ಲಿ ಮೂರ್ತೀ ಭವಿಸಿರುತ್ತದೆ. ಪ್ರತಿ ಇಲ್ಲ. ಎದುರಿಲ್ಲ’’ (ಪು . ೪೫೧)- ಇತ್ಯಾದಿ ಅನೇಕ ಹೇಳಿಕೆಗಳನ್ನು ಇಲ್ಲಿ ಉದಾಹರಿಸಬಹುದು. ಕುರ್ತಕೋಟಿಯವರ ಈ ಕೃತಿಯಲ್ಲಿ ಪರಸ್ಪರ ವಿರೋಧಾಭಾಸವುಳ್ಳ ಅನೇಕ ಹೇಳಿಕೆಗಳಿರುವುದನ್ನು ಹಾ. ಮಾ. ನಾಯಕರಂಥ ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ (ಸಮೀಕ್ಷೆ; ಪು. ೧೭-೨೧) ‘‘ಎಷ್ಟೋ ವೇಳೆ ಕುರ್ತಕೋಟಿಯವರು ಏನು ಹೇಳಲು ಬಯಸುತ್ತಾರೆಂಬುದು ನಮಗೆ ತಿಳಿಯುವುದಿಲ್ಲ’’ ಎಂಬುದನ್ನೂ ಉದಾಹರಣೆ ಸಹಿತ ತೋರಿಸಿ ಕೊಟ್ಟಿದ್ದಾರೆ. (ಅದೇ ; ಪು. ೨೦)

ಅವೇನೇ ಇದ್ದರೂ ಕುರ್ತಕೋಟಿಯವರ ಪ್ರಸ್ತುತ ಗ್ರಂಥವು ಯುಗಧರ್ಮದ ಹಿನ್ನೆಲೆಯೊಂದಿಗೆ ಆಯಾ ಕಾಲದ ಸಾಹಿತ್ಯದ ಇತಿಹಾಸವನ್ನು ಹೇಳವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ನವೋದಯದಿಂದ ನವ್ಯದ ವರೆಗಣ ಹೊಸಗನ್ನಡ ಸಾಹಿತ್ಯದ ವಿಸ್ತೃತ ಇತಿಹಾಸವನ್ನೊಳಗೊಂಡ ಪ್ರಾತಿನಿಧಿಕ ಗ್ರಂಥವಿದು. ಹೊಸಗನ್ನಡ ಸಾಹಿತ್ಯದಲ್ಲಿ ಅದರಲ್ಲೂ ವಿಮರ್ಶಾ ಕ್ಷೇತ್ರದಲ್ಲಿ ಕ್ರಾಂತಿಯನ್ನೆಬ್ಬಿಸಿದ ಕೃತಿಯಿದು. ಆದರೆ ಕನ್ನಡ ಕಾವ್ಯದ ಮಹತ್ವದ ಕ್ರಾಂತಿಗಳಾದ ಗೋವಿಂದ ಪೈಯವರ ಪ್ರಾಸತ್ಯಾಗ ಮತ್ತು ಸಾನೆಟ್‌ಗಳ ಬಳಕೆಯ ಪ್ರಸ್ತಾಪ ಇಲ್ಲಿಲ್ಲ. ಅದೇ ರೀತಿ ಸಣ್ಣಕತೆಯನ್ನು ಕುರಿತ ಲೇಖನದಲ್ಲಿ ಆ ಕಾಲದ ಗಮನಾರ್ಹ ಕತೆಗಳಲ್ಲೊಂದಾದ ಕೊರಡ್ಕಲ್ ಶ್ರೀನಿವಾಸರಾಯರ ‘ದನಿಯರ ಸತ್ಯನಾರಾಯಣ’ ದ ಉಲ್ಲೇಖವಿಲ್ಲ. ಈಗಾಗಲೇ ಹಾ. ಮಾ. ನಾಯಕರು ಗುರುತಿಸಿರುವಂತೆ ಜಿ. ಎಸ್. ಶಿವರುದ್ರಪ್ಪನವರಂಥ ಕವಿಗಳನ್ನೂ, ಚದುರಂಗರಂಥ ಕಥೆಗಾರರನ್ನೂ ಇಲ್ಲಿ ಪ್ರಸ್ತಾಪಿಸಿಲ್ಲ. (ಅದೇ) ಇಂಥ ಕೆಲವೊಂದು

ಮಾಹಿತಿಗಳ ಕೊರತೆ ಹಾಗೂ ತೀರ್ಮಾನಗಳಲ್ಲಿನ ಭಿನ್ನಾಭಿಪ್ರಾಯಗಳು ಇದ್ದೂ ಪ್ರಸ್ತುತ ಕೃತಿ ನಮಗೆ ಮಹತ್ವದ್ದೆನಿಸುತ್ತದೆ. ಹಾ. ಮಾ. ನಾಯಕರಂದಂತೆ ''ಇಷ್ಟನ್ನು ಹೇಳಿಯೂ ಇದು ಈ (೬೦ ನೆಯ) ದಶಕದ ಅತ್ಯಂತ ಮಹತ್ವಪೂರ್ಣ ಸಾಹಸ ಮತ್ತು ಪ್ರಯೋಗ ಎಂಬುದನ್ನು ಒಪ್ಪಿಕೊಳ್ಳಬಹುದಾಗಿದೆ'' (ಅದೇ; ಪು. ೨೧) . ಹೊಸಗನ್ನಡ ಸಾಹಿತ್ಯದ ಇತಿಹಾಸದಲ್ಲಂತೂ ಇದೊಂದು ಮೈಲಿಗಲ್ಲೆಂಬುದರಲ್ಲಿ ಅನುಮಾನವೇ ಇಲ್ಲ. ಪ್ರತಿಯೊಬ್ಬ ಸಾಹಿತ್ಯದ ವಿದ್ಯಾರ್ಥಿಯೂ ತಪ್ಪದೆ ಓದಲೇಬೇಕಾದ ಕೃತಿಯಿದು. ಇಲ್ಲಿನ ಇತಿಹಾಸ ಪ್ರಬಂಧಗಳನ್ನೆಲ್ಲಾ ೧೯೫೮ರಲ್ಲಿ ಬರೆಯಲಾಗಿರುವುದರಿಂದ ಅದು ವರೆಗಣ - ಅರ್ಥಾತ್ ನವ್ಯದ ವರೆಗಣ-ಕನ್ನಡ ಸಾಹಿತ್ಯದ ಇತಿಹಾಸವನ್ನಷ್ಟೆ ನಮಗಿಲ್ಲಿ ಕಾಣಲು ಸಾಧ್ಯ. ನವ್ಯೋತ್ತರ ಕನ್ನಡ ಸಾಹಿತ್ಯದ ಇತಿಹಾಸವೊಂದನ್ನು ಕುರ್ತಕೋಟಿಯವರು ಬರೆಯಬೇಕಾದ ಅವಶ್ಯಕತೆ ಬಹಳಷ್ಟಿದೆ. ಅದನ್ನವರು ಬರೆದರೆ, ವಿಶೇಷವಾಗಿ ದಲಿತ-ಬಂಡಾಯ ಸಾಹಿತ್ಯದ ಬಗೆಗಿನ ಅವರ ನಿಲುವು ಹೇಗಿರಬಹುದೆಂಬುದನ್ನು ತಿಳಿಯುವ ಕುತೂಹಲ ಹಲವರಲ್ಲಿದೆ.

### ೨. ನವ್ಯಕಾವ್ಯ ಪ್ರಯೋಗ(೧೯೬೩)

ಇದು ಮೂಲತಃ ಮನ್ವಂತರದ ಎರಡನೆಯ ಸಂಪುಟದಲ್ಲಿ ಪ್ರಕಟವಾದ ಮುಖ್ಯ ಪ್ರಬಂಧ. ಕನ್ನಡ ನವ್ಯಕಾವ್ಯದ ಉಗಮ ಮತ್ತು ವಿಕಾಸವನ್ನು ಸೋದಾಹರಣವಾಗಿ ಚರ್ಚಿಸುವ ಕೃತಿಯಿದು. ಒಟ್ಟು ಹನ್ನೊಂದು ಲೇಖನಗಳಿದ್ದು, ಮೊದಲನೆಯದು ಕನ್ನಡ ನವ್ಯಕಾವ್ಯಕ್ಕೆ ಪ್ರಭಾವ- ಪ್ರೇರಣೆಗಳನ್ನೊದಗಿಸಿ, ಹಿನ್ನೆಲೆಯಾಗುಳ್ಳ ಇಂಗ್ಲಿಷ್ ನವ್ಯಕಾವ್ಯದ ಉದ್ಗಮ (ಉಗಮ) ವನ್ನು ಕುರಿತುದಾಗಿದೆ. ಎರಡನೆಯ ಲೇಖನವು ಕನ್ನಡ ನವ್ಯಕಾವ್ಯದ ಉದ್ಗಮಕ್ಕೆ ಸಂಬಂಧಿಸಿದುದಾಗಿದೆ. ನಂತರದ ಏಳು ಲೇಖನಗಳಲ್ಲಿ ವಿನಾಯಕ, ಗೋಪಾಲಕೃಷ್ಣ ಅಡಿಗ, ಕೆ. ಎಸ್. ನರಸಿಂಹ ಸ್ವಾಮಿ, ಬಿ.ಸಿ. ರಾಮಚಂದ್ರ ಶರ್ಮ, ಚೆನ್ನವೀರ ಕಣವಿ, ಗಂಗಾಧರ ಚಿತ್ತಾಲ ಮತ್ತು ಎ. ಕೆ. ರಾಮಾನುಜನ್ ರಂತಹ ಪ್ರಮುಖ ಕವಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಕನ್ನಡ ನವ್ಯಕಾವ್ಯದ ವಿಕಾಸವನ್ನು ವಿವರಿಸಲಾಗಿದೆ. ಕೊನೆಯಲ್ಲಿ ಎರಡು ಉಪಸಂಹಾರ ಲೇಖನಗಳಿದ್ದು, ಒಂದರಲ್ಲಿ ಹೊಸ ತಲೆಮಾರಿನ ನವ್ಯಕವಿಗಳ ಬಗೆಗಿನ ವಿವೇಚನೆಯದೆ. ಇನ್ನೊಂದರಲ್ಲಿ ಕನ್ನಡ ಕಾವ್ಯದ ಮುನ್ನೋಟವಿದೆ.

ಕನ್ನಡ ನವ್ಯಕಾವ್ಯದ ಉಚ್ಛ್ರಾಯ ಕಾಲದಲ್ಲಿ ಬಂದ ಕೃತಿಯಿದು. ಈ ಕೃತಿಯನ್ನು ಬರೆದು ಕುರ್ತಕೋಟಿಯವರು ಅಂದು ಹಲವರ ಮೆಚ್ಚುಗೆಯನ್ನು ಗಳಿಸುವುದರ ಜತೆಗೆ ಅನೇಕರ ಟೀಕೆಗೂ ಒಳಗಾಗಿದ್ದಾರೆ. ಮುಖ್ಯವಾಗಿ ಅಡಿಗರ ಕಾವ್ಯವನ್ನು ಅವರು ಸರಿಯಾಗಿ ಅರ್ಥೈಸಿಕೊಂಡಿಲ್ಲವೆಂದು ಅರೋಪಿಸಿ ಲಂಕೇಶರು ''ಅಡಿಗರು; ಕುರ್ತಕೋಟಿಯವರ ಪ್ರಜ್ಞೆ'' ( ಪ್ರಸ್ತುತ; ೧೯೭೦) ಎಂಬೊಂದು ಲೇಖನವನ್ನೇ ಬರೆದರು. ಗೋಕಾಕ್ (ವಿನಾಯಕ) ಮತ್ತು ಅಡಿಗರ ಕಾವ್ಯಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಕುರ್ತ ಕೋಟಿಯವರು ಒಂದು ರೀತಿಯ ಪಕ್ಷಪಾತ ಧೋರಣೆಯನ್ನಿಟ್ಟು ಕೊಂಡುದನ್ನು ನಂತರದ ಅನೇಕ ವಿಮರ್ಶಕರು ಗುರುತಿಸಿದ್ದಾರೆ.

ಕುರ್ತಕೋಟಿಯವರಿಗೆ ಹಿಂದಿನ ನವೋದಯ ಕಾವ್ಯದ ಮೇಲಿದ್ದ ಒಲವು ನವ್ಯಕಾವ್ಯದ ಮೇಲಿದ್ದಿಲ್ಲವೆಂಬುದು ಪ್ರಸ್ತುತ ಕೃತಿಯಿಂದ ಮನವರಿಕೆಯಾಗುತ್ತದೆ. ನಮ್ಮ ನಾಡಿನ (ಆ ಕಾಲದ) ಯುಗಧರ್ಮಕ್ಕೂ ನವ್ಯಕಾವ್ಯವು ಬಿಂಬಿಸುವ ಅಂಶಗಳಿಗೂ ಪರಸ್ಪರ ಸಂಬಂಧವೇ ಇಲ್ಲ ಎಂಬರ್ಥದ ಮಾತುಗಳು ಈ ಕೃತಿಯಲ್ಲಿವೆ. ''ಒಟ್ಟಿನಲ್ಲಿ ನವ್ಯ ಕಾವ್ಯ ಕನ್ನಡ ಜನಜೀವನದ ಕೇಂದ್ರದಿಂದ ದೂರ ಸರಿಯತೊಡಗಿದೆ. ಅದರ ಉದ್ದೇಶ ಹಾಗೂ ಪ್ರಯೋಜನಗಳು ಕೇವಲ ತಾಂತ್ರಿಕ ಸಿದ್ಧಿಯನ್ನು ಪಡೆಯುವುದಕ್ಕಷ್ಟೇ ಸೀಮಿತವಾಗಿವೆ. ವಿಶ್ವವಿದ್ಯಾಲಯದ ಶಿಕ್ಷಣವನ್ನು ಪಡೆದಿರುವ ಪದವೀಧರರ ಬೌದ್ಧಿಕ ತಿಳುವಳಿಕೆಯ ಚತುಃಸೀಮೆಗಳಲ್ಲಿ ಮಾತ್ರ ಅದು ಬೆಳೆಯತೊಡಗಿದೆ.'' (ಪು. ೧೪೮) ''ಕಾವ್ಯದಲ್ಲಿ ಬದಲಾಗಿರುವ ಪ್ರಜ್ಞೆಗೂ. ಜೀವನದಲ್ಲಿ ಬದಲಾಗಿರುವ ಪ್ರಜ್ಞೆಗೂ ಸಂಬಂಧವೇ ಇಲ್ಲದಾಗಿದೆ'' (ಪು. ೧೫೦). ಇತ್ಯಾದಿ ಮಾತುಗಳಲ್ಲಿ ಈ ಅಂಶವನ್ನು ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಎಂತಿದ್ದರೂ ಅದುವರೆಗಣ ನವ್ಯಕಾವ್ಯದ ಹುಟ್ಟು - ಬೆಳವಣಿಗೆಗಳನ್ನು, ಸ್ಥಿತಿ-ಗತಿಗಳನ್ನು ವಿಶ್ಲೇಷಿಸುವ ಮೊದಲ ಕೃತಿಯಾಗಿ ಇದು ಮಹತ್ವವನ್ನು ಪಡೆದುಕೊಳ್ಳುತ್ತದೆ. 'ಯುಗಧರ್ಮ ಹಾಗೂ ಸಾಹಿತ್ಯದರ್ಶನ' ಮತ್ತು 'ನವ್ಯಕಾವ್ಯ ಪ್ರಯೋಗ' ಎಂಬ ಕೃತಿಗಳ ಮೂಲಕ ಆಧುನಿಕ ಕನ್ನಡ ವಿಮರ್ಶೆಗೆ ಅವಶ್ಯವಾದ ಭಾಷೆಯೊಂದನ್ನು ಕುರ್ತಕೋಟಿಯವರು ರೂಪಿಸಿಕೊಂಡರೆಂಬುದರಲ್ಲಿ ಎರಡು ಮಾತಿಲ್ಲ.

## ೩. ಹೊಸಗನ್ನಡದಲ್ಲಿ ಮಹಾಕಾವ್ಯ: 'ಶ್ರೀ ರಾಮಾಯಣದರ್ಶನಂ'

ಈ ಕಿರುಪುಸ್ತಿಕೆಯು 'ಮನ್ವಂತರ'ದ ನಾಲ್ಕನೆಯ ಸಂಪುಟದಲ್ಲಿ ಮೊದಲು (೧೯೬೫) ಪ್ರಕಟವಾದ ೨೧ ಪುಟಗಳ ಒಂದು ಸಮೀಕ್ಷಾಲೇಖನವಾಗಿದೆ. ಕುವೆಂಪು ಅವರ ಮಹಾಕಾವ್ಯವನ್ನು ನೇತ್ಯಾತ್ಮಕವಾಗಿ ಪರಿಭಾವಿಸಬೇಕೆಂಬ ಪೂರ್ವ ನಿರ್ಧಾರದಿಂದ ಹೊರಟು, ಅಂಥ ಪರಿಭಾವನೆಗೆ ಪೂರಕವಾಗುವ ಕಾವ್ಯಭಾಗಗಳನ್ನಷ್ಟೇ ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕಾವ್ಯದ ಹಿರಿಮೆಯ ಬಗೆಗೆ ಸ್ವತಃ ಕವಿಗಳೇ ಕೃತಿಯೊಳಗಡೆ ಹೇಳಿಕೊಂಡಿರುವ ಸಾಲುಗಳನ್ನೆಲ್ಲಾ ವಿವೇಚಿಸಿ ಅಲ್ಲಿನ ಇತ್ಯಾತ್ಮಕ ಅಂಶಗಳನ್ನೆಲ್ಲಾ ಅಲ್ಲಗಳೆಯುವ ತಾರ್ಕಿಕ ಪ್ರವೃತ್ತಿಯನ್ನು ಇಲ್ಲಿ ಕಾಣಬಹುದಾಗಿದೆ. ಇದು '' ಮಹಾಕಾವ್ಯವನ್ನೇ ನಿರ್ಮಿಸಬೇಕೆಂಬ ಹಂಬಲದಿಂದ ಹುಟ್ಟಿದ ಕಾವ್ಯ...... ಇಂಥ ಕಾವ್ಯದಲ್ಲಿ ಭವ್ಯತೆ ಇರಬಹುದು, ಜೊತೆಗೆ ಭವ್ಯತೆಯ ಅಭಾವವೂ ಇರಬಹುದು'' ಇತ್ಯಾದಿ ಹೇಳಿಕೆಗಳ ಮೂಲಕ '' ರಾಮಾಯಣದರ್ಶನ'' ದ ಮೌಲ್ಯವನ್ನು ಕುರ್ತಕೋಟಿಯವರು ನಿರ್ಧರಿಸಿಬಿಡುತ್ತಾರೆ. ಅವರ ಮಾತನ್ನೇ ಬಳಸಿ ಹೇಳುವುದಾದರೆ. ರಾಮಾಯಣದರ್ಶನದಲ್ಲಿ ಎಲ್ಲೆಲ್ಲಿ ಭವ್ಯತೆಯ ಅಭಾವ ಕಾಣಿಸಿಕೊಂಡಿದೆ ಎಂಬುದನ್ನಷ್ಟೇ ಗುರುತಿಸಿ ಕೃತಿಯ ಬೆಲೆಗಟ್ಟುವ ಪ್ರಯತ್ನವಿದು.

## ೪. ಭೃಂಗದ ಬೆನ್ನೇರಿ (೧೯೭೫)

ಕುರ್ತಕೋಟಿಯವರೇ ಹೇಳುವಂತೆ 'ಜೀವನಾನುಭವದ ಪ್ರಾಣ ಶಕ್ತಿ ಎಳ್ಳಷ್ಟೂ ಕಡಿಮೆಯಾಗದಂತೆ ಅದನ್ನು ಕಾವ್ಯ ಸಾಮಗ್ರಿಯನ್ನಾಗಿ ಮಾಡಿಕೊಂಡ, ಅದೇ ರೀತಿ ಕನ್ನಡ ಕಾವ್ಯ ಪರಂಪರೆಯ ಸಹಜತೆ ಕೆಡದಂತೆ ಅಭಿವ್ಯಕ್ತಿಯನ್ನು ರೂಪಿಸಿಕೊಂಡ ಬೇಂದ್ರೆಯವರ ಕಾವ್ಯ ಪ್ರಜ್ಞೆಯ ಪರಿಶೀಲನೆಯನ್ನು 'ಭೃಂಗದ ಬೆನ್ನೇರಿ' ಸಂಕಲನದ ಪ್ರಬಂಧಗಳಲ್ಲಿ ಕಾಣಬಹುದು೧, (ಪ್ರಸ್ತಾವನೆ; ಪು. ೧೦-೧೧).

ಪ್ರಸ್ತುತ ಕೃತಿಗೆ ಬರೆದ ದೀರ್ಘವಾದ ಪ್ರಸ್ತಾವನೆಯಲ್ಲಿ ಕುರ್ತಕೋಟಿಯವರು ಬೇಂದ್ರೆಯವರ ಕಾವ್ಯವನ್ನು ವಿಶ್ಲೇಷಿಸಲು -ಅರ್ಥೈಸಲು ಅವಶ್ಯವಾದ ವಿಮರ್ಶನ ಪ್ರಜ್ಞೆಯ ಕುರಿತು ಚರ್ಚಿಸುತ್ತಾರೆ. ಜತೆಗೆ ವಿಮರ್ಶೆ ಹಾಗೂ ವಿಮರ್ಶಕನ ಗುಣ-ಲಕ್ಷಣಗಳನ್ನೂ ವಿವರಿಸುತ್ತಾರೆ. ''ಕೃತಿ ಒಳ್ಳೆಯದಾಗಿದ್ದರೆ ಅದರ ವಿಮರ್ಶೆಯ ಮಾನದಂಡಗಳು ಆ ಕೃತಿಯಲ್ಲಿಯೇ ನಿಹಿತವಾಗಿರುತ್ತವೆ. ಅದನ್ನು ಹುಡುಕಿ ತೆಗೆಯುವುದು ವಿಮರ್ಶಕನ ಮುಖ್ಯ ಕೆಲಸವಾಗಿದೆ. ಅದಕ್ಕಾಗಿ ಅವನು ಆ ಕೃತಿಯ ಪ್ರಜ್ಞೆಯ ಮೂಲವನ್ನು ಅರಸಿಕೊಂಡು ಹೋಗಬೇಕಾಗುತ್ತದೆ. ಕಾರಣ ವಿಷ್ಲೇ-ವಿಮರ್ಶೆಯ ಸೂತ್ರಗಳು ಸೃಷ್ಟಿಯ ನಿಯಮಗಳಂತೆ ತ್ರಿಕಾಲಾಬಾಧಿತವಾಗಿ, ಅಪೌರುಷೇಯವಾಗಿರುವುದಿಲ್ಲ. ಪ್ರತಿಯೊಂದು ಕವಿತೆಯೂ ಒಂದು ಸೃಷ್ಟಿ ಕಾರ್ಯವಾಗಿದ್ದರೆ ಅದರ ಗುಣಧರ್ಮ ವೇನೆಂಬುದನ್ನು ಅದು ಕೊಡುವ ಬೆಳಕಿನಲ್ಲಿಯೇ ಪರೀಕ್ಷಿಸಬೇಕು'' (ಪ್ರಸ್ತಾವನೆ; ಪು. ೫-೬) ಎನ್ನುತ್ತಾರೆ. ನವ್ಯ ವಿಮರ್ಶೆಯು ಸಾಹಿತ್ಯ ವಿಮರ್ಶೆಗೆ ಶಾಸ್ತ್ರದ ಶಿಸ್ತನ್ನು ಕಲಿಸಿಕೊಟ್ಟಿದ್ದಲ್ಲದೆ ಅದಕ್ಕೆ ಎಲ್ಲಿಲ್ಲದ ಪ್ರಬುದ್ಧತೆಯನ್ನು ತಂದು ಕೊಟ್ಟಿತೆನ್ನುವ ಲೇಖಕರು ಅದರ ಮಿತಿಗಳನ್ನೂ ಹೇಳದಿರುವುದಿಲ್ಲ (ಅದೇ; ಪು.೬) ''ಒಂದು ಜೀವಂತ ಪ್ರಾಣಿಯನ್ನು ಎಚ್ಚರ ತಪ್ಪಿಸಿ ಅದರ ಅಂಗಾಂಗಗಳನ್ನು ಪರೀಕ್ಷೆಗೆ ಒಳಗು ಮಾಡುವುದು ಶಾಸ್ತ್ರವೇ ಇರಬಹುದು. ಆದರೆ ಅದರಿಂದ ಸಮಗ್ರ ಸತ್ಯವು ದೃಗ್ಗೋಚರವಾದೀತು ಎಂಬ ಭ್ರಮೆ ಇರಬಾರದು'' ( ಅದೇ; ಪು. ೭) . ಇತ್ಯಾದಿ ಮಾತುಗಳು ನವ್ಯ ವಿಮರ್ಶೆಯನ್ನು ದೃಷ್ಟಿಯಲ್ಲಿರಿಸಿಕೊಂಡೇ ಬರೆದಂಥವುಗಳಾಗಿವೆ.

''ಸಾಹಿತ್ಯ ವಿಮರ್ಶೆಯೆಂದರೆ ಎರಡು ಜೀವಂತ ಪ್ರಜ್ಞೆಗಳ ಸಂಪರ್ಕ ಮತ್ತು ಸಂಘರ್ಷವಾಗಿದೆ. ವಿಮರ್ಶಕ ನಿರ್ವಿಕಾರನಾಗಿರಬೇಕು. ಎಂದರೆ ಅವನಲ್ಲಿ ಪೂರ್ವಾಗ್ರಹಗಳಿರಬಾರದು. ಸ್ವಂತದ ಆಗ್ರಹಗಳಿಂದ ಕೃತಿಯ ಪ್ರಜ್ಞೆಯನ್ನು ಮಲಿನಗೊಳಿಸಬಾರದು'' (ಅದೇ) ಎಂದು ಹೇಳುತ್ತಾರೆ. ಬೇಂದ್ರೆಯವರ ನಂಬಿಕೆಗಳು, ಸಂಸ್ಕಾರ, ಅವರು ಬುದ್ಧಿಪೂರ್ವಕವಾಗಿ ಆಲೋಚಿಸಿ ಸಾಧಿಸಿದ ವಿಷಯವಿಸ್ತಾರ, ಅಲ್ಲದೆ ಕನ್ನಡ ಕಾವ್ಯ ಪರಂಪರೆಯ ಪ್ರಭಾವ- ಇವೆಲ್ಲವುಗಳಿಂದ ರೂಪುಗೊಂಡ ಅವರ ಕಾವ್ಯದ

---

೧. ಈ ಕೃತಿಯು ಮುಂದೆ ೧೯೯೩ರಲ್ಲಿ ಪ್ರಕಟವಾದ 'ಬಾರೋ ಸಾಧನ ಕೇರಿಗೆ' ಎಂಬ ವಿಮರ್ಶಾ ಸಂಪುಟದಲ್ಲಿ ಮತ್ತೆ ಸೇರ್ಪಡೆಯಾಗಿದೆ. ಆ ಕೃತಿಯ ಅವಲೋಕನದ ಸಂದರ್ಭದಲ್ಲಿ ಪ್ರಸ್ತುತ ಕೃತಿಯ ಬಗೆಗೂ ವಿವರಿಸಲಾಗುವುದು.

ವಿಶಿಷ್ಟತೆಯನ್ನು ನವ್ಯ ವಿಮರ್ಶೆಯ ವಿಧಾನ ಯಶಸ್ವಿಯಾಗಿ ಹಿಡಿಯಲಾರದೆಂದು ಅಭಿಪ್ರಾಯಪಡುತ್ತಾರೆ (ಅದೇ; ಪು. ೮). ಒಟ್ಟಿನಲ್ಲಿ ಆರೇಳು ಪುಟಗಳ ಈ ಪ್ರಸ್ತಾವನೆಯು ವಿಮರ್ಶೆಗೆ ಸಂಬಂಧಪಟ್ಟಂತೆ ಕೆಲವೊಂದು ಮಹತ್ವದ ಅಂಶಗಳನ್ನೊಳಗೊಂಡಿದ್ದು, ಬೇಂದ್ರೆಯವರ ಕಾವ್ಯಾಧ್ಯಯನಕ್ಕೆ ಹಿನ್ನೆಲೆಯಾಗಿ ನಿಲ್ಲುತ್ತದೆ.

ಡಿ. ಆರ್. ನಾಗರಾಜರು ಅಭಿಪ್ರಾಯಪಡುವಂತೆ 'ಬೇಂದ್ರೆಯವರ ಕಾವ್ಯ ಎಷ್ಟರ ಮಟ್ಟಿಗೆ ಬೌದ್ಧಿಕ ವ್ಯವಸ್ಥೆಗಳನ್ನು ಅವಲಂಬಿಸಿದೆ ಎಂಬ ಪ್ರಶ್ನೆಯನ್ನು ಕೀರ್ತಿನಾಥ ಕುರ್ತಕೋಟಿಯವರು ತಮ್ಮ '' ಭೃಂಗದ ಬೆನ್ನೇರಿ'' ಕೃತಿಯಲ್ಲಿ ಉತ್ತರಿಸುತ್ತಾರೆ, (ಶಕ್ತಿಶಾರದೆಯ ಮೇಳ, ಪು. ೩೪) . ಆದರೆ ''ಬೇಂದ್ರೆಯವರ ಕಾವ್ಯದ ಅನೇಕ ಅಂಶಗಳ ಮಟ್ಟಿಗೆ ಅತ್ಯಂತ ಮಹತ್ವದ ಒಳನೋಟ. ಅರ್ಥೈಸುವಿಕೆಯ ಕ್ರಮಗಳನ್ನು ಕನ್ನಡ ವಿಮರ್ಶಾಲೋಕಕ್ಕೆ ತಂದ ಈ ಕೃತಿಯಲ್ಲಿ ಪ್ರಸ್ತುತ ಸಮಸ್ಯೆಯ ಮಟ್ಟಿಗೆ ಕುರ್ತಕೋಟಿಯವರ ನಿಲುವು ಬೇಂದ್ರೆಯವರ ಕಾವ್ಯದ ಮೂಲ ಬೇರುಗಳನ್ನು ಹಿಡಿಯಲು ಅಷ್ಟು ಸಹಾಯಕವಾಗಿಲ್ಲ'' ಎಂಬುದನ್ನೂ ನಾಗರಾಜ್ ಅವರು ತಕ್ಕ ಉದಾಹರಣೆಗಳ ಮೂಲಕ ಇಲ್ಲಿ ಸ್ಪಷ್ಟ ಪಡಿಸುತ್ತಾರೆ. (ಅದೇ)

**೫. ಯಶೋಧರ ಚರಿತೆಯ ಕಾವ್ಯತಂತ್ರ (೧೯೮೨)**

ಬೆಂಗಳೂರು ವಿಶ್ವವಿದ್ಯಾಲಯದ 'ಮಾಸ್ತಿ ರಾಮಸ್ವಾಮಿ ತಿರುಮಲಮ್ಮ' ದತ್ತಿ ಉಪನ್ಯಾಸ ಮಾಲೆಯನ್ವಯ ಕುರ್ತಕೋಟಿಯವರು ನೀಡಿದ ಉಪನ್ಯಾಸದ ಪುಸ್ತಕ ರೂಪವಿದು. ವಾದಿರಾಜನ ಮೂಲ ಸಂಸ್ಕೃತ 'ಯಶೋಧರ ಚರಿತ'ವನ್ನು ಅನುಸರಿಸಿಯೂ ಜನ್ನನು ಅದರ ಅನುವಾದದಲ್ಲಿ ತನ್ನ ಸ್ವಂತಿಕೆಯನ್ನು ಹೇಗೆ ಮೆರೆದಿದ್ದಾನೆಂಬುದನ್ನು ತಕ್ಕ ಉದಾಹರಣೆಗಳ ಮೂಲಕ ವ್ಯಕ್ತಪಡಿಸುವುದೇ ಈ ಕಿರುಹೊತ್ತಿಗೆಯ ಉದ್ದೇಶವಾಗಿದೆ.

'ವಾದಿರಾಜನ ಕಾವ್ಯಾರ್ಥವನ್ನು ಜನ್ನ ಸರಿಯಾಗಿ ಗ್ರಹಿಸಿ ಅದನ್ನು ಸ್ಪಷ್ಟಗೊಳಿಸಲು ಸಾಕಷ್ಟು ಪ್ರಯತ್ನಿಸಿದ್ದಾನೆ; ಮಾತ್ರವಲ್ಲ ಮೂಲದಲ್ಲಿಲ್ಲದ ಅನೇಕ ಪದ ಪುಂಜಗಳನ್ನು, ಉಪಯುಕ್ತವಾದ ಟಿಪ್ಪಣಿಗಳನ್ನು ಆತ ಸೇರಿಸಿದ್ದಾನೆ. ವಾದಿರಾಜ ಕಾಮದ ಅವಿವೇಕದ ವಿಲಕ್ಷಣತೆಯನ್ನಷ್ಟೇ ಹೇಳಿದರೆ ಜನ್ನ ಅದನ್ನು ವಿಧಿಯ ವಿಚಿತ್ರ ಲೀಲೆಗೆ ಜೋಡಿಸಿ ಅದರ ವ್ಯಾಪ್ತಿಯನ್ನು ಹೆಚ್ಚಿಸುತ್ತಾನೆ; ಜೈನ ಧರ್ಮದ ಜತೆಗೆ ರಾಜಧರ್ಮವನ್ನೂ ಸೂಚಿಸುತ್ತಾನೆ. ಹೀಗೆ ಅಲ್ಲಲ್ಲಿ ಜನ್ನನ ಕಾವ್ಯ ವಾದಿರಾಜನ ಕಾವ್ಯದ ಅರ್ಥವನ್ನು ಸ್ಪಷ್ಟಗೊಳಿಸುವದಲ್ಲದೆ ಆ ಅರ್ಥವನ್ನು ವಿಸ್ತರಿಸುತ್ತ ಹೋಗುತ್ತದೆ. ಆದರೆ ಎಲ್ಲಿಯೂ ವಿಸ್ತಾರಗೊಳ್ಳುವ ಕ್ರಿಯೆ ಮಿತಿಮೀರುವುದಿಲ್ಲ. ಕಾವ್ಯದ ಆಕಾರವನ್ನು ಅಂದಗೆಡಿಸುವುದಿಲ್ಲ' (ಪು. ೫-೬) .''ಅಕಂಪನಾಚಾರ್ಯರು ಕಂಡು ಕೊಂಡ ಆತ್ಮದ ನೆಲೆ, ಉಳಿದ ವ್ಯಕ್ತಿಗಳು ಬೆನ್ನು ಹತ್ತಿದ ಅದೃಷ್ಟದ ಶೋಧನೆ ಇವು ಒಂದೇ ಆಗಿ ಕಾಣಿಸುತ್ತಿದ್ದರೂ ವಸ್ತುತಃ ಭಿನ್ನವಾದವುಗಳೆಂಬುದನ್ನು ಕಾವ್ಯ ಪ್ರತಿಮಾ ಯೋಜನೆಯ

ಮೂಲಕವಾಗಿ ಸಾರುತ್ತದೆ. ನೈತಿಕ ಹಾಗೂ ಆಧ್ಯಾತ್ಮಿಕ ಭೇದಗಳನ್ನು ಕಲೆಯ ನೆರಳು ಬೆಳಕಿನ ಮೂಲಕ ತೋರಿಸುವ ಪ್ರಯತ್ನ ಜನ್ನನಲ್ಲಿ ಯಶಸ್ವಿಯಾಗುತ್ತದೆ.'' (ಪು . ೨೯) ಇತ್ಯಾದಿ ಬಹು ಮುಖ್ಯವಾದ ಅಭಿಪ್ರಾಯಗಳನ್ನು ಜನ್ನನ ಕಾವ್ಯದ ಬಗೆಗೆ ಕುರ್ತಕೋಟಿಯವರು ವ್ಯಕ್ತಪಡಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ''ಇದು ಮುಖ್ಯವಾಗಿ ಪಾಪ ಮತ್ತು ಅದಕ್ಕೆ ಅನಿವಾರ್ಯವಾದ ಪ್ರಾಯಶ್ಚಿತ್ತದ ಕಥೆ'' (ಪು.೪).

ಒಟ್ಟಿನಲ್ಲಿ 'ಯಶೋಧರ ಚರಿತೆ' ಹಿಂಸೆಯ ಪಾಪವನ್ನು ಎತ್ತಿ ತೋರಿಸಿ ಅಹಿಂಸೆಯ, ಜೀವ ದಯೆಯ ಮಹತ್ವವನ್ನು ಪ್ರಕಟಿಸುವ ಕಾವ್ಯವೆನ್ನುತ್ತಾ ಕಾಮ ಮತ್ತು ಹಿಂಸೆಗಳೆರಡೂ ಜನ್ನನ ಕಾವ್ಯದಲ್ಲಿ ಅಭಿನ್ನವಾಗಿ ತೋರುವ ಬಗೆಯನ್ನು ಎತ್ತಿಹೇಳಿದ್ದಾರೆ. ಅಷ್ಟವಂಕನ ಮೇಲಿನ ಅಮೃತ ಮತಿಯ ಒಲವನ್ನು ವಾಸ್ತವ ಸತ್ಯವನ್ನು ನಿರಾಕರಿಸಿದ 'ವಿದೇಹವಾದ ಒಲವು' ಎನ್ನುತ್ತಾರೆ[೧] (ಪು. ೨೮). ಜನ್ನನ 'ಯಶೋಧರ ಚರಿತೆ'ಯನ್ನು ಅರ್ಥೈಸಿಕೊಳ್ಳುವುದಕ್ಕೆ ಇದು ಉಪಯುಕ್ತ ಪುಸ್ತಕವಾಗಿದೆ.

### ೬. ವಿಮರ್ಶೆಯ ವಿನಯ - ಕಾದಂಬರಿ (೧೯೮೨)

ಕನ್ನಡದ ಬೇರೆ ಬೇರೆ ಕಾದಂಬರಿಗಳ ಬಗೆಗೆ ಕುರ್ತಕೋಟಿಯವರು ಕಾಲಕಾಲಕ್ಕೆ ಬರೆದ ಒಟ್ಟು ಒಂಬತ್ತು ಲೇಖನಗಳನ್ನು ಇಲ್ಲಿ ಸಂಕಲಿಸಲಾಗಿದೆ. ಜಡಭರತರ ಕನಸುಗಳಲ್ಲಿ ಹೊಸ ಕಾಣ್ಕೆ[೨], ಕೆರೂರು ವಾಸುದೇವಾಚಾರ್ಯರ ಕಾದಂಬರಿಗಳು, ಮಾಸ್ತಿಯವರ ಐತಿಹಾಸಿಕ ಕಾದಂಬರಿಗಳು, ಕಾರಂತರ ಕಾದಂಬರಿಗಳಲ್ಲಿ ಸಂವೇದನೆಯ ಬೆಳವಣಿಗೆ, ದೇವುಡು ಅವರ ಕಾದಂಬರಿಗಳಲ್ಲಿ ಸಾಹಿತ್ಯ ಮತ್ತು ಧರ್ಮಶ್ರದ್ಧೆ ರಾವಬಹುದ್ದೂರರ ಗ್ರಾಮಾಯಣ, ಭೈರಪ್ಪನವರ ಕಾದಂಬರಿಗಳಲ್ಲಿ ಮೌಲ್ಯ ವಿಧಾನದ ಸಮಸ್ಯೆ, ಶ್ರೀರಂಗರ ಕಾದಂಬರಿಗಳಲ್ಲಿ ಕಥನ ಶಿಲ್ಪ, ಕುವೆಂಪು ಅವರ ಮಲೆಗಳಲ್ಲಿ ಮದುಮಗಳು- ಎಂಬ ಇಲ್ಲಿನ ಲೇಖನಗಳಲ್ಲಿ ಹೆಚ್ಚಿನವುಗಳೂ ಈ ಮೊದಲೇ ಅನ್ಯಾನ್ಯ ಗ್ರಂಥಗಳಲ್ಲಿ ಬೆಳಕುಕಂಡಿದ್ದವು.

ಪ್ರಾರಂಭದ ಲೇಖನವು ಜಡಭರತರ ಮೂಲ ಕೃತಿಯಂತೆ ದಾರ್ಶನಿಕ ವಿಚಾರಗಳಿಂದ ಇಡಿಕಿರಿದಿದ್ದು, ಸಾಮಾನ್ಯ ಓದಿಗೆ ಸುಲಭವಾಗಿ ನಿಲುಕುವುದಿಲ್ಲ. ನಂತರದ ಪ್ರಬಂಧಗಳು ಆಯಾ ಕಾದಂಬರಿಗಳನ್ನು, ಅದೇ ರೀತಿ ಕಾದಂಬರಿಕಾರರನ್ನು

---

೧. ಕುರ್ತಕೋಟಿಯವರು ಇಲ್ಲಿ 'ವಿದೇಹವಾದ ಒಲವು' ಎಂಬುದನ್ನು ಯುವ ಅರ್ಥದಲ್ಲಿ ಬಳಸಿದ್ದಾರೆಂಬ ಬಗ್ಗೆ ಸ್ವಲ್ಪ ವಿಚಾರಮಾಡಬೇಕಾಗುತ್ತದೆ. ದೇಹವನ್ನು ಗೌಣವಾಗಿ ಪರಿಗಣಿಸಿದ ಒಲವು ಎಂಬರ್ಥದಲ್ಲಿ ಬಳಸಿರುವರೆಂದಾದರೆ ಅದನ್ನು ಒಪ್ಪುವ ಹಾಗಿಲ್ಲ. ಯಾಕೆಂದರೆ ಅಮೃತ ಮತಿಗೆ ಅಷ್ಟವಂಕನ ದೇಹಸುಖವೂ ಮುಖ್ಯವಾಗಿತ್ತು. ಪ್ರಾರಂಭದಲ್ಲಿ ಆತನ ಸಂಗೀತಕ್ಕೆ ತನ್ನ ಮನಸ್ಸನ್ನೇ 'ಪಸಾಯದಾನಂಗೊಟ್ಟ' ಸನ್ನಿವೇಶವೊಂದನ್ನು ಬಿಟ್ಟರೆ ನಂತರ ಎಂದೂ ಆಕೆ ಅಷ್ಟವಂಕನ ಸಂಗೀತವನ್ನಾಲಿಸಿ ಆನಂದಿಸಿದ ಉಲ್ಲೇಖ ಕಾವ್ಯದಲ್ಲಿಲ್ಲ. ಆದರೆ ಆತನ ಒರಟು ದೇಹದ ಸುಖವನ್ನು ಆಕೆ ಅನೇಕ ಬಾರಿ ಅನುಭವಿಸಿದ್ದಾಳೆ.

೨. ಈ ಲೇಖನ ನಂತರದಲ್ಲಿ (೧೯೯೨) ಪ್ರಕಟವಾದ 'ಬಯಲು -ಆಲಯ' ಎಂಬ ವಿಮರ್ಶಾ ಗ್ರಂಥದಲ್ಲೂ ಸೇರ್ಪಡೆಯಾಗಿದೆ.

ಅರ್ಥೈಸಿಕೊಳ್ಳುವಲ್ಲಿ ತುಂಬ ನೆರವಾಗುತ್ತವೆ. ಎರಡನೆಯ ಲೇಖನದಲ್ಲಿ ಕೆರೂರರ 'ಇಂದಿರೆ' ಕಾದಂಬರಿಯ ಕುರಿತು ಬರೆಯುತ್ತಾ ''ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ 'ಇಂದಿರೆ' ಕಾದಂಬರಿಯು ಇತಿಹಾಸದ ದೃಷ್ಟಯಿಂದ ಮಹತ್ವದ್ದಾಗಿದೆಯೇ ಹೊರತು ಕಲೆಯ ದೃಷ್ಟಿಯಿಂದಲ್ಲ.'' (ಪು. ೨೬) ಎನ್ನುತ್ತಾರೆ.

ಮಾಸ್ತಿಯವರ ಐತಿಹಾಸಿಕ ಕಾದಂಬರಿಗಳನ್ನು ವಿಮರ್ಶಿಸುತ್ತಾ ''ಎಂಥ ಅಪಾಯದ ಹೊತ್ತಿನಲ್ಲಿಯೂ ಸುರಕ್ಷಿತವಾಗಿ ಉಳಿಯ ಬಲ್ಲ ಮೌಲ್ಯಗಳ ಮತ್ತು ಅವನ್ನು ಉಳಿಸಿಕೊಂಡು ಬರಬೇಕೆಂಬ ಹಂಬಲವುಳ್ಳ ವ್ಯಕ್ತಿಗಳ ಚಿತ್ರಣ ಈ ಎರಡೂ ಕೃತಿಗಳಲ್ಲಿ ಅರ್ಥಪೂರ್ಣವಾದ ಅಂಶಗಳಾಗಿವೆ'' (ಪು. ೩೬) ಎಂದು ಹೇಳುತ್ತಾರೆ. ಅಲ್ಲೇ 'ಚೆನ್ನ ಬಸವನಾಯಕ' ಕಾದಂಬರಿಯ ಬಗ್ಗೆ ಬರೆಯುತ್ತಾ ''ಧರ್ಮವಿದ್ದು ಅವ್ಯವಸ್ಥೆಗೀಡಾದ ಸಮಾಜದಲ್ಲಿ ವಿಧರ್ಮೀಯನೊಬ್ಬ ಒಂದು ವ್ಯವಸ್ಥೆಯನ್ನು ಏರ್ಪಡಿಸುತ್ತಾನೆ. ಇದು ಈ ದೇಶದ ದೊಡ್ಡ ದುರಂತ ಎಂಬ ಧ್ವನಿ ಈ ಕಾದಂಬರಿಯಲ್ಲಿದೆ'' (ಪು. ೩೯) ಎಂದು ಅಭಿಪ್ರಾಯ ಪಡುತ್ತಾರೆ. ಈ ಹೇಳಿಕೆಗಳನ್ನು ಮನದಟ್ಟು ಮಾಡಿಕೊಡುವ ಪೂರಕ ಚರ್ಚೆಗಳೂ ಪ್ರಸ್ತುತ ಲೇಖನದಲ್ಲಿವೆ. ಹೀಗೆ ಇಲ್ಲಿನ ಎಲ್ಲಾ ಲೇಖನಗಳೂ ಕುರ್ತಕೋಟಿಯವರ ಮೌಲಿಕ ವಿಚಾರಗಳಿಂದ ಉಪಯುಕ್ತ ವಿವಿರ-ತೀರ್ಮಾನಗಳಿಂದ ಪರಿಪುಷ್ಟವಾಗಿವೆ. ಬೇರೆ ಬೇರೆ ಕಾಲ - ಸಂದರ್ಭಗಳಲ್ಲಿ ಬರೆದ ಲೇಖನಗಳೆಂಬುದನ್ನು ಗಮನದಲ್ಲಿರಿಸಿಕೊಂಡೇ ಇವುಗಳನ್ನು ಓದಬೇಕಾಗುತ್ತದೆ.

**೭. ವಿಮರ್ಶೆಯ ವಿನಯ: ನಾಟಕ (೧೯೮೫)**

ಇದರಲ್ಲಿ ಒಟ್ಟು ಹದಿನಾರು ಲೇಖನಗಳಿವೆ. ಮೊದಲ ಮಾತಲ್ಲಿ ಕುರ್ತಕೋಟಿಯವರೇ ಹೇಳಿಕೊಂಡಿರುವಂತೆ ''ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ಕಾರಣಗಳಿಗಾಗಿ ಬರೆದು, ಬೇರೆ ಬೇರೆ ಕಡೆಗಳಲ್ಲಿ ಪ್ರಕಟವಾದ ರಂಗಭೂಮಿ ಮತ್ತು ನಾಟಕಗಳ ಮೇಲಿನ ವಿಮರ್ಶೆಯ ಲೇಖನಗಳು ಈ ಸಂಗ್ರಹದಲ್ಲಿ ಒಟ್ಟುಗೂಡಿವೆ.''

ಕಂಬಾರರ 'ಹೇಳತೀನಿ ಕೇಳ' ನಾಟಕವಲ್ಲದ್ದರಿಂದ ಅದರ ಬಗೆಗಿನ ಕಿರುಲೇಖನವನ್ನು ಪ್ರತ್ಯೇಕ ಶೀರ್ಷಿಕೆಯಾಗಿ ರಂಗಭೂಮಿ ಮತ್ತು ನಾಟಕಕ್ಕೆ ಮೀಸಲಾದ ಈ ಕೃತಿಯಲ್ಲಿ ಕೊಟ್ಟಿರುವುದು ಸ್ವಲ್ಪ ಆಭಾಸವಾಗಿ ಪರಿಣಮಿಸಿದೆ. ಮೇಲಾಗಿ 'ಋಷ್ಯಶೃಂಗ' ನಾಟಕದ ಚರ್ಚೆಗೆ ಪೀಠಿಕೆಯಾಗಿ ಆ ಕೃತಿಯ ಮುನ್ನುಡಿಯಲ್ಲೇ (೧೯೭೧) ಈ ಭಾಗವೂ ಸೇರಿಕೊಂಡಿತ್ತು. ಹಾಗಾಗಿ ಇದನ್ನಿಲ್ಲಿ ಪ್ರತ್ಯೇಕ ಲೇಖನವಾಗಿ ನೀಡುವ ಅಗತ್ಯವಿರಲಿಲ್ಲವೆಂದು ತೋರುತ್ತದೆ. ೧೯೫೬ ರಲ್ಲಿ ಪ್ರಕಟವಾದ ತಮ್ಮ ''ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು'' ಎಂಬ ಕೃತಿಗೆ ಬರೆದ ಮೊದಲ ಮಾತನ್ನು ಇಲ್ಲಿ ''ಕನ್ನಡದಲ್ಲಿ ಗೀತನಾಟಕಗಳು'' ಎಂಬ ಹೊಸ ಶೀರ್ಷಿಕೆಯಿಂದ ಕೊಟ್ಟಿರುವುದು ಅಷ್ಟೇನೂ ಔಚಿತ್ಯ ಪೂರ್ಣವೆನ್ನಿಸುವುದಿಲ್ಲ. ತಮ್ಮ ಕೃತಿಗೆ ಸಂಬಂಧಪಟ್ಟ ಮಾತುಗಳನ್ನೇ ಯಥಾವತ್ತಾಗಿ ನೀಡಿರುವುದರಿಂದ ಅವು ಇಲ್ಲಿನ ಹೊಸ ಶೀರ್ಷಿಕೆಗೆ

ಸರಿಹೊಂದುವುದಿಲ್ಲ. ಉದಾಹರಣೆಗೆ ಲೇಖನದ ಪ್ರಾರಂಭದ ಸಾಲುಗಳನ್ನೇ ಗಮನಿಸಬಹುದು. ''೧೯೫೨ರಿಂದ ಇಲ್ಲಿಯ ವರೆಗೆ, ಈ ಐದು ವರ್ಷಗಳ ಕಾಲಾವಧಿಯಲ್ಲಿ ಬರೆದ ಐದು ಗೀತನಾಟಕಗಳ ಸಂಗ್ರಹ ಇಲ್ಲಿದೆ......'' ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಕಟವಾದ ಲೇಖನಗಳನ್ನೆಲ್ಲಾ ಒಂದು ಸಂಕಲನವಾಗಿ ಹೊರತರುವಾಗ ಉಂಟಾಗಬಹುದಾದ ಇಂತಹ ಆಭಾಸಗಳನ್ನೆಲ್ಲಾ ಲೇಖಕರು ಯಾಕೆ ಗಮನಿಸಿಲ್ಲವೆಂದು ಅಚ್ಚರಿಯುಂಟಾಗುತ್ತದೆ. ಇಂಥ ಕೆಲವು ತಾಂತ್ರಿಕ ದೋಷಗಳನ್ನು ಹೊರತು ಪಡಿಸಿದರೆ ಇಲ್ಲಿನ ಲೇಖನಗಳೆಲ್ಲ [ಕನ್ನಡ ಅಂದು ಇಂದಿನ ರಂಗ ಭೂಮಿ, ಸಂಗ್ಯಾ ಬಾಳ್ಯಾ, ಹೇಳತೀನಿ ಕೇಳ, ಋಷ್ಯಶೃಂಗ, ದಿ. ಕೆರೂರವರ ರುಕ್ಮಿಣೀಹರಣ, ಶ್ರೀರಂಗರ ಅಮೃತರಂಗ, ಕನ್ನಡದಲ್ಲಿ ಶೇಕ್ಸ್‌ಪಿಯರ್, ಜಡಭರತರ ಮೂಕಬಲಿ, ಜಡಭರತರ ಸತ್ತವರ ನೆರಳು, ಗಿರೀಶ್ ಕಾರ್ನಾಡರ ಮೊದಲ ನಾಟಕ, ನಾಟಕ ಶಿಲ್ಪ (ತುಘಲಕ), ಕನ್ನಡದಲ್ಲಿ ಗೀತನಾಟಕಗಳು, ಹೊಸ ನಾಟಕಗಳಲ್ಲಿ ಪುರಾಣಗಳ ಉಪಯೋಗ, ಹೊಸ ನಾಟಕಗಳಲ್ಲಿ ಪಾತ್ರ ರಚನೆ, ಅಸಂಗತ ನಾಟಕಗಳು, ನಾಟಕ ಮತ್ತು ಭಾಷೆ] ಗುಣಮಟ್ಟದ ದೃಷ್ಟಿಯಿಂದ ಉತ್ತಮವಾಗಿವೆ.

ಮೊದಲ ಮಾತಲ್ಲಿ ಕುರ್ತಕೋಟಿಯವರು ಸಂಸರ ಬಗ್ಗೆ ಪ್ರತ್ಯೇಕ ಬರೆಯಲಾಗಲಿಲ್ಲವೆಂಬ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಈ ಕೊರತೆಯನ್ನು ಮುಂದೆ ೧೯೯೧ರಲ್ಲಿ ಪ್ರಕಟವಾದ '' ನಾಟಕದಲ್ಲಿ ಚಾರಿತ್ರಿಕ ವಸ್ತು ವಿನ್ಯಾಸ- ಸಂಸ ನಾಟಕ ಚಕ್ರ'' ('ರಂಗಧ್ವನಿ') ಎಂಬ ತಮ್ಮ ಲೇಖನದಲ್ಲಿ ಸ್ವಲ್ಪಮಟ್ಟಿಗೆ ತುಂಬಿಕೊಟ್ಟಿದ್ದಾರೆನ್ನಬಹುದು.

**೮. ಸಂಸ್ಕೃತಿ ಸ್ಪಂದನ (೧೯೮೬)**

'ಮಲ್ಲಿಗೆ' ಮಾಸಿಕದ 'ಸ್ಪಂದನ' ಅಂಕಣ ಮಾಲಿಕೆಯಲ್ಲಿ ಕಾಲ ಕಾಲಕ್ಕೆ ಪ್ರಕಟವಾದ ಒಟ್ಟು ಹದಿನಾಲ್ಕು ಕಿರುಲೇಖನಗಳನ್ನು ಇಲ್ಲಿ ಪುಸ್ತಕರೂಪದಲ್ಲಿ ಒಂದು ಗೂಡಿಸಲಾಗಿದೆ. ವಿಮರ್ಶೆಯ ವಿನಯ, ಇತಿಹಾಸದ ಭಯ, ಸಾದೃಶ್ಯ ಸಂಬಂಧ, ಪಾತ್ರ ಪ್ರಪಂಚ, ನಾಟಕ ಮತ್ತು ದೇವತೆಗಳು, ನಾಟಕದ ಕ್ರೀಡನೀಯತೆ, ಪ್ರತ್ಯಭಿಜ್ಞಾನ, ಕಥೆಯ ಕಥೆ, ಕಥನ ತಂತ್ರ, ಗೀತಧ್ವನಿ, ಅಭಿಜಾತ-ಜಾನಪದ, ಗೋವಿನ ಕಥೆ, ನಮ್ಮ ದೇವಾಲಯಗಳು, ಬಾಹುಬಲಿ : ಲೋಕೋತ್ತರ ಶಿಲ್ಪ - ಇವೆಲ್ಲ ಒಂದಲ್ಲ ಒಂದು ರೀತಿಯಿಂದ ಸಂಸ್ಕೃತಿಗೆ ಸಂಬಂಧಪಟ್ಟ ಬರಹಗಳೇ ಆಗಿವೆ. ಓರ್ವ ಸೃಜನಶೀಲ ವಿಮರ್ಶಕ ಸಂಸ್ಕೃತಿಯ ಅಂಶಗಳಿಗೆ ಸ್ಪಂದಿಸಿದರೂ ಅವು ಶ್ರೇಷ್ಠ ಮಟ್ಟದ ವಿಮರ್ಶೆಗಳೇ ಆಗಿರುತ್ತವೆಂಬುದಕ್ಕೆ ಇಲ್ಲಿನ ಬರಹಗಳು ಉತ್ತಮ ಉದಾಹರಣೆಗಳಾಗಿವೆ. ಅಂಕಣ ಬರಹಗಳಾದರೂ ಇಲ್ಲಿ ಕುರ್ತಕೋಟಿಯವರ ವಿಮರ್ಶೆಯ ಪ್ರಜ್ಞೆ ಎದ್ದು ಕಾಣುತ್ತದೆ. ಪ್ರಾರಂಭದಲ್ಲಿ ಮನೋಹರ ಗ್ರಂಥ ಮಾಲೆಯ ಸಂಪಾದಕರಾದ ಜಿ. ಬಿ. ಜೋಶಿಯವರು ಅಭಿಪ್ರಾಯಪಟ್ಟಿರುವಂತೆ ''ಇದು ಸ್ವಲ್ಪ ಗಂಭೀರವಾದ, ವಿಚಾರ ಪ್ರಚೋದಕವಾದ ಸಾಹಿತ್ಯ. ವಿಷಯ ಗಂಭೀರವಿದ್ದರೂ ನಿರೂಪಣೆ ಅತ್ಯಂತ ಸರಳವಾಗಿ, ಹೃದ್ಯವಾಗಿ ಒಡಮೂಡಿದೆಯೆನ್ನಲಡ್ಡಿಯಿಲ್ಲ.''

ಒಟ್ಟಿನಲ್ಲಿ ಇಲ್ಲಿನ ಬರಹಗಳನ್ನೂ, ಪ್ರಜಾವಾಣಿಯಲ್ಲಿ ಅವರು ಬರೆಯುತ್ತಿರುವ ಅಂಕಣ ಬರಹಗಳನ್ನೂ ಗಮನಿಸಿದರೆ 'ಆಡು ಮುಟ್ಟದ ಸೊಪ್ಪಿಲ್ಲ' ಎಂದಂತೆ 'ಕುರ್ತಕೋಟಿಯವರು ಸ್ಪರ್ಶಿಸದ ವಿಷಯವಿಲ್ಲ' ಎನ್ನಬಹುದಾಗಿದೆ. ಅಭಿಜಾತ ಸಾಹಿತ್ಯ, ಲೋಕಪ್ರಿಯ ಸಾಹಿತ್ಯ, ಶಾಸ್ತ್ರಸಾಹಿತ್ಯ, ಜಾನಪದ, ಸಂಗೀತ, ನೃತ್ಯ, ಶಿಲ್ಪ ಧರ್ಮ, ಆಧ್ಯಾತ್ಮ, ವೇದಾಂತ, ಇತಿಹಾಸ, ಪುರಾಣ - ಹೀಗೆ ನಮ್ಮ ಸಂಸ್ಕೃತಿಯ ಎಲ್ಲಾ ಸಂಗತಿಗಳೂ ಅವರ ಚಿಂತನೆಗೆ ಒಳಪಟ್ಟು, ಬೆಲೆಯುಳ್ಳ ವಿಚಾರಗಳು ಅವರಿಂದ ಹೊರಹೊಮ್ಮುತ್ತವೆ.

**೯. ಕುಮಾರವ್ಯಾಸ (೧೯೮೯)**

ಕೇಂದ್ರ ಸಾಹಿತ್ಯ ಅಕಾಡೆಮಿಯ 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಮಾಲಿಕೆಯಲ್ಲಿ ಪ್ರಕಟವಾದ ೧೦೨ ಪುಟಗಳ ಚಿಕ್ಕ ಗ್ರಂಥವಿದು. ಸ್ಥಳ - ಕಾಲ ಮತ್ತು ವ್ಯಕ್ತಿತ್ವ; ಕಾವ್ಯಸ್ವರೂಪ; ನಾಯಕ ಪಾತ್ರ ಶ್ರೀ ಕೃಷ್ಣ; ಪಾತ್ರ ಪ್ರಪಂಚ; ನಿರೂಪಣೆಯ ಕೌಶಲ್ಯ; ಕುಮಾರ ವ್ಯಾಸನ ಶೈಲಿ- ಎಂಬ ಲೇಖನಗಳ ಮೂಲಕ ಕುಮಾರವ್ಯಾಸನ ಬಗೆಗೂ, ಆತನ 'ಕರ್ಣಾಟ ಭಾರತ ಕಥಾಮಂಜರಿ' ಕಾವ್ಯದ ಬಗೆಗೂ ಇಲ್ಲಿ ಮೌಲಿಕವಾದ ಒಳನೋಟಗಳನ್ನು ಬೀರಲಾಗಿದೆ.

''ಕುಮಾರವ್ಯಾಸನ ಪ್ರತಿಯೊಬ್ಬ ವ್ಯಕ್ತಿ ತನ್ನ ಪೌರುಷದ ಸೀಮೆಗೆ ಬಂದು ಮುಟ್ಟಿದಾಗ ದೈವವನ್ನು ಅರಿತುಕೊಳ್ಳುತ್ತಾನೆ. ಈ ಸಂಗತಿ ಸಂಸ್ಕೃತ ಮಹಾಭಾರತದಲ್ಲಿ ಕೂಡ ಇದೆ. ಆದರೆ ಕುಮಾರವ್ಯಾಸನಲ್ಲಿ ವಿಶೇಷವಾದದ್ದೆಂದರೆ ದೈವ ಮತ್ತು ಕೃಷ್ಣ ಇವರ ಸಮೀಕರಣ'' (ಪು. ೪೨) ಎಂಬ ಕುರ್ತಕೋಟಿಯವರ ಮಾತು ಬಹಳ ಮುಖ್ಯವಾದುದು. ಕುಮಾರವ್ಯಾಸನ ಕಾವ್ಯದ ನಿಯಾಮಕ ಶಕ್ತಿ ಕೃಷ್ಣನೆಂದು ಹೇಳುವ ಲೇಖಕರು ನೂರಾರು ಮಾನುಷ ಪಾತ್ರಗಳು ಕೃಷ್ಣನೊಡನೆ ನಡೆಸುವ ನಿರಂತರವಾದ ಸಂವಾದವೇ ಕುಮಾರವ್ಯಾಸನಲ್ಲಿ ಕಾವ್ಯವಾಗುವ ಬಗೆಯನ್ನು ತೋರಿಸಿ ಕೊಡುತ್ತಾರೆ. (ಪು. ೨೪). ಕವಿಸಮಯಗಳ ಹಳಸಲನ್ನು ಬಿಟ್ಟು, ರೂಪಕ ನಿರ್ಮಾಣಕ್ಕೆ ಸುತ್ತಮುತ್ತಣ ಸಾಮಾನ್ಯ ವಸ್ತುಗಳನ್ನು ಆರಿಸಿಕೊಂಡಿರುವುದು ಕುಮಾರವ್ಯಾಸನ ಶೈಲಿಯ ವೈಶಿಷ್ಟ್ಯಗಳಲ್ಲೊಂದೆಂದು ಪರಿಗಣಿಸುತ್ತಾರೆ. (ಪು. ೯೨).

''ಪಂಪನ ಕಾವ್ಯ ಸಂಸ್ಕೃತ ಮಹಾಕಾವ್ಯಗಳ ಪ್ರಭಾವದಿಂದ ತನ್ನನ್ನು ಬಿಡಿಸಿಕೊಳ್ಳುತ್ತ, ಕನ್ನಡದ ಶುದ್ಧ ಸತ್ವವನ್ನೇ ಮೆರೆಯಿಸುತ್ತ ಒಂದು ಹೊಸ ಕಾವ್ಯ ಮಾರ್ಗವನ್ನು ತೆರೆಯಿತು. ಆ ಹಾದಿಗುಂಟ ನಡೆದ ಕನ್ನಡ ಕಾವ್ಯ ಕ್ರಮಕ್ರಮವಾಗಿ ಬೆಳೆಯುತ್ತ ಲಕ್ಷ್ಮೀಶನಲ್ಲಿ ಕನ್ನಡ ತನ್ನದೇ ಅಭಿಜಾತತೆಯನ್ನು ಪಡೆಯಿತೆಂಬ ಸಂಗತಿ ನಿರ್ವಿವಾದವಾಗಿದೆ. ಲಕ್ಷ್ಮೀಶ ಕವಿಯ ಅಭಿಜಾತತೆ ಇನ್ನೂ ವಿಮರ್ಶೆಯ ನಿಕಷಕ್ಕೆ ಇಳಿದಿಲ್ಲ. ಅದೇನೇ ಇದ್ದರೂ ಅಭಿಜಾತತೆಯ ಮಾರ್ಗದಲ್ಲಿದ್ದ ಕನ್ನಡ ಕಾವ್ಯದ ಶಕ್ತಿ ಮತ್ತು ಸಮೃದ್ಧಿಗಳು ಕುಮಾರವ್ಯಾಸನ ಕಾವ್ಯದಲ್ಲಿ ಹೆಚ್ಚು ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಕಾವ್ಯದ ಸಮಗ್ರತೆ ಅವನೊಬ್ಬನಲ್ಲಿ ಮಾತ್ರ ದೊರೆಯುವಂಥದು.

ಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಕನ್ನಡ ಕಾವ್ಯಸಿದ್ಧಿಯ ಚರಮ ಸೀಮೆಯನ್ನು ಕುಮಾರವ್ಯಾಸನಂಥ ಕವಿಗಳಲ್ಲಿ ಮಾತ್ರ ಗುರುತಿಸಬಹುದೆಂದರೆ ಅತಿಶಯೋಕ್ತಿಯಾಗಲಾರದು'' (ಪು. ೧೦೨) ಎಂಬ ಕುರ್ತಕೋಟಿಯವರ ಇಲ್ಲಿನ ಮಾತುಗಳು ವಿಚಾರಯೋಗ್ಯವಾಗಿವೆ.

ಕುರ್ತಕೋಟಿಯವರ ಪ್ರಸ್ತುತ ಕೃತಿಯೂ ಈ ಹಿಂದೆ ಪ್ರಕಟವಾದ ''ಕುಮಾರವ್ಯಾಸ : ಜೀವನದೃಷ್ಟಿ ಹಾಗೂ ಕಾವ್ಯಸ್ವರೂಪ'' ಎಂಬ ಅವರ ಲೇಖನವೂ ಕೆಲವೊಂದು ಮಹತ್ವದ ಹೊಳಹುಗಳನ್ನೊಳಗೊಂಡಿದ್ದು, ಕುಮಾರವ್ಯಾಸನ ಕಾವ್ಯಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾಗುತ್ತವೆ.

### ೧೦. ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ (೧೯೯೦)

'ಪುಟ ಬಂಗಾರ'ದ ಐದು ಸಂಪುಟಗಳಿಗೆ ಕುರ್ತಕೋಟಿಯವರು ಬರೆದಿದ್ದ ಮುನ್ನುಡಿಗಳು ಇಲ್ಲಿ ಒಂದೆಡೆ ಸೇರಿವೆ. ನಾಲ್ಕನೆಯ ಸಂಪುಟಕ್ಕೆ ಮುನ್ನುಡಿ ಬರೆಯುತ್ತಾ ಕುರ್ತಕೋಟಿಯವರು ''ಮನೋಹರ ಗ್ರಂಥ ಮಾಲೆ ತನ್ನ ಸ್ವರ್ಣ ಮಹೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಪ್ರಕಟವಾಗಿರುವ ಈ ನಾಲ್ಕು ಸಂಪುಟಗಳಿಗೆ ಬರೆದಿರುವ ಈ ಮುನ್ನುಡಿಗಳು ಇಂದಿನ ಸಾಹಿತ್ಯಿಕ ವಾತಾವರಣವನ್ನು ಅರಿತುಕೊಳ್ಳಲು ಪ್ರಯತ್ನಿಸುತ್ತಿವೆ'' (ಪು. ೮೨) ಎಂದಿದ್ದಾರೆ. ಅವರೇ ಮುಂದುವರಿದು ''ಸಂಪುಟಗಳಲ್ಲಿ ಪ್ರಕಟವಾಗಿರುವ ಸಾಹಿತ್ಯಕ್ಕೂ (ಸಣ್ಣಕತೆ, ಕಾದಂಬರಿ, ನಾಟಕ, ಹರಟೆ, ಪ್ರವಾಸಸಾಹಿತ್ಯ, ಆತ್ಮಚರಿತ್ರೆ ಮತ್ತು ವಿಮರ್ಶೆ) ಈ ಮುನ್ನುಡಿಗಳಿಗೂ ಯಾವ ಸಂಬಂಧವೂ ಇಲ್ಲ'' (ಅದೇ) ಎನ್ನುತ್ತಾರೆ. ಇದರಂತೆ ಅಲ್ಲಿನ ಮುನ್ನುಡಿಗಳಿಗೆ ಸಂಪುಟಗಳ ಸಾಹಿತ್ಯದೊಂದಿಗೆ ನಿರ್ದಿಷ್ಟವಾದ ಬದ್ಧತೆಯೆಂಬುದಿರಲಿಲ್ಲ. ಹಾಗಾಗಿಯೇ ಅವುಗಳನ್ನಿಲ್ಲಿ ಪ್ರತ್ಯೇಕ ಸಂಕಲನವಾಗಿ ಹೊರತಂದಾಗ ಅಪ್ರಸ್ತುತವೆನಿಸಲಿಲ್ಲ. ಆದರೆ ೫ನೆಯ ಸಂಪುಟದ ಮುನ್ನುಡಿ ಮಾತ್ರ ಅಲ್ಲಿನ ವಿಷಯಕ್ಕೆ ಬದ್ಧವಾಗಿದ್ದು, ಅದನ್ನಿಲ್ಲಿ ಪ್ರತ್ಯೇಕ ಸಂಕಲನದಲ್ಲಿ ಸೇರಿಸಿರುವುದರಿಂದ ಏನೋ ಅಸಹಜತೆ ತಲೆದೋರಿದಂತಿದೆ. ಪ್ರಸ್ತುತ 'ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ' ಕೃತಿಯ ೮೫ನೆಯ ಪುಟದಲ್ಲಿ ಇದ್ದಕ್ಕಿದ್ದಂತೆ ಶೀರ್ಷಿಕೆಯೇನೂ ಇಲ್ಲದೆ ಈ ಮುನ್ನುಡಿಯ ಭಾಗ ಪ್ರಾರಂಭವಾಗುತ್ತದೆ. ''ಮೊಟ್ಟ ಮೊದಲು ಪ್ರಕಟವಾದ ಬೇಂದ್ರೆಯವರ ಕಾವ್ಯಗ್ರಂಥ 'ಕೃಷ್ಣಾಕುಮಾರಿ'. ಇನ್ನು ಮೇಲೆ ಪ್ರಕಟವಾಗಲಿರುವ 'ಪ್ರತಿ ಬಿಂಬಗಳು' ಸದ್ಯಕ್ಕೆ ಕೊನೆಯದು. ಒಟ್ಟು ಮೂವತ್ತಕ್ಕೂ ಮೇಲ್ಪಟ್ಟು ಪ್ರಕಟವಾದ ಅವರ ಕವನಸಂಕಲನಗಳಿಂದ ನೂರು ಕವಿತೆಗಳನ್ನು, ಆಯ್ದು 'ಶ್ರಾವಣ ಪ್ರತಿಭೆ' ಎಂಬ ಈ ಸಂಕಲನವನ್ನು ಸಿದ್ಧಗೊಳಿಸಲಾಗಿದೆ......'' ಕುರ್ತಕೋಟಿಯವರ ಬರವಣಿಗೆಯ ಗುಣಮಟ್ಟದ ಬಗೆಗೆ ಎರಡು ಮಾತಿಲ್ಲವಾದರೂ ಅಲ್ಲಲ್ಲಿ ಕಾಣಿಸಿಕೊಳ್ಳುವ ಇಂತಹ ತಾಂತ್ರಿಕ ದೋಷಗಳ ಬಗೆಗೆ ಹೇಳದೆ ಗತ್ಯಂತರವಿಲ್ಲ

## ೧೧. ಬಯಲು - ಆಲಯ (೧೯೯೨)

ಭಾಷಾಂತರ ಮತ್ತು ಪುನರ್ಲೇಖನ, ಕಥಾಂತರ, ಹೊಸಗನ್ನಡ ಗದ್ಯ ಮತ್ತು ಪದ್ಯ, ವಿ. ಸೀ. ಗದ್ಯ ಪ್ರಬಂಧ, ಮತ್ತು ಜಡಭರತರ ಕನಸುಗಳಲ್ಲಿ ಹೊಸ ಕಾಣ್ಕೆ ಎಂಬ ಐದು ಲೇಖನಗಳು ಇಲ್ಲಿ ಸಂಕಲನಗೊಂಡಿವೆ. ''ಈ ಗ್ರಂಥದಲ್ಲಿಯ ಐದು ಸಾಹಿತ್ಯ ಪ್ರಬಂಧಗಳು ನವೋದಯದ ಐದು ಪ್ರಮುಖ ಲೇಖಕರ ಸಾಹಿತ್ಯದ ಅಭ್ಯಾಸಕ್ಕೆ ಮೀಸಲಾಗಿದ್ದರೂ ಅವುಗಳ ಗುರಿ ಸಾಹಿತ್ಯದ ವಿಮರ್ಶೆಯಾಗಲಿ, ಮೌಲ್ಯಮಾಪನವಾಗಲಿ ಅಲ್ಲ. ಅವರ ಬರವಣಿಗೆಯಲ್ಲಿಯ ಕೆಲವು ಆಶಯಗಳು, ಅವರು ಅನುಭವಿಸಿದ ಆತಂಕ - ಮುಜುಗರಗಳು, ಅವರು ಕಂಡ ಕನಸುಗಳು, ಇವುಗಳನ್ನು ಅಭಿವ್ಯಕ್ತಿಸಲು ಅವರು ಅನುಸರಿಸಿದ ಉಪಾಯಗಳು ಇವುಗಳ ಬಗ್ಗೆ ಬರೆದದ್ದಾಗಿದೆ. ನವೋದಯದ ಕಾಲ ಸಂಕ್ರಾಂತಿ ಕಾಲವಾಗಿದ್ದಕ್ಕೆ ಕಾರಣವೆಂದರೆ ನಮ್ಮ ಲೇಖಕರು ಎರಡು ಭಿನ್ನ ಸಂಸ್ಕೃತಿಗಳ ನಡುವಿನ ಸಂಘರ್ಷವನ್ನು ಅನಿವಾರ್ಯವಾಗಿ ಅನುಭವಿಸಬೇಕಾಯಿತು. ಹೊಸದನ್ನು ಸ್ವಾಗತಿಸುವ, ಜೊತೆಯಲ್ಲಿ ಹಳೆಯದನ್ನು ಬಿಡಬೇಕಾಗಿ ಬಂದಾಗ ಅದರ ನೋವನ್ನು ಅನುಭವಿಸುವ ಈ ಭಾವಸ್ಥಿತಿ ಬಹಳ ಗಹನವಾದದ್ದು. ಈ ಗ್ರಂಥ ಅಂಥ ಭಾವಸ್ಥಿತಿಯ ಅಭ್ಯಾಸವಾಗಿದೆ.'' - ಎಂಬ ಕುರ್ತಕೋಟಿಯವರ ಮುನ್ನುಡಿಯ ಮಾತುಗಳೇ ಇಲ್ಲಿನ ಲೇಖನಗಳ ಒಟ್ಟು ಆಶಯವೇನೆಂಬುದನ್ನು ತಿಳಿಸುತ್ತವೆ.

ರಹಮತ್ ತರೀಕೆರೆಯವರು ಈ ಕೃತಿಯನ್ನು ವಿಮರ್ಶಿಸುತ್ತಾ ''ಇಲ್ಲಿನ ಸಾಹಿತ್ಯಕ ಚರ್ಚೆಯು ಸಂಸ್ಕೃತಿ ಚರ್ಚೆಯ ರೂಪವನ್ನು ಪಡೆದುಕೊಳ್ಳುವುದರಿಂದ ಇವು ಒಂದು ಬಗೆಯ ಸಾಂಸ್ಕೃತಿಕ ಚಿಂತನೆಗಳೂ ಆಗಿವೆ'' (ಪ್ರಜಾವಾಣಿ ; ಜುಲೈ ೪, ೧೯೯೩). ಎಂದಿದ್ದಾರೆ. ಅವರೇ ಮುಂದುವರಿದು '' ಕುರ್ತಕೋಟಿಯವರದು ರಾಮಾಯಣ, ಮಹಾಭಾರತ, ಕಾಳಿದಾಸ, ಭಾಸ-ಮುಂತಾದವರ ಸಂಸ್ಕೃತ, ಶಿಷ್ಟ ಪ್ರಧಾನ ಸಂಸ್ಕೃತಿಯ ನೆಲೆ, ಹೀಗಾಗಿ ಇಲ್ಲಿನ ಸಂಸ್ಕೃತಿಯ ಚರ್ಚೆಯೊಳಗೆ ಪ್ರತಿಷ್ಠಿತ ಅಕ್ಷರ ಸಂಸ್ಕೃತಿಯೊಳಗೆ ಬಾರದ ಇಂಡಿಯಾದ ಜಾನಪದದಂಥ ಬಹುಮುಖೀ ಸಂಸ್ಕೃತಿಗಳ ಒಳಗೊಳ್ಳುವಿಕೆಯಿಲ್ಲ''; ''ಬಯಲು- ಆಲಯದ ಬರಹಗಳು ಈ ಹೊತ್ತಿನ ಸಾಹಿತ್ಯದ - ಸಾಂಸ್ಕೃತಿಕವಾದ ಮುಖ್ಯ ಸಂವಾದಗಳಿಂದ ಕಡಿದುಕೊಂಡಂತೆ ಇವೆ. ಅಂದರೆ ಚರಿತ್ರೆಯನ್ನು ವಿಶ್ಲೇಷಿಸುತ್ತ ವರ್ತಮಾನಕ್ಕೆ ಬರದೆ ಅಲ್ಲೇ ನಿಂತಂತಾಗಿರುವುದು'' (ಅದೇ) - ಇತ್ಯಾದಿ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ''ವಸಾಹತುಶಾಹಿಯ ಕಾಲದಲ್ಲಿ ಎರಡು ಸಂಸ್ಕೃತಿಗಳ ಸಂಘರ್ಷದ ಕೇಂದ್ರ ಸ್ಥಾನದಲ್ಲಿ ನಿಂತು, ತಮ್ಮ ಜೀವನದೃಷ್ಟಿಯನ್ನು ರೂಪಿಸಿಕೊಂಡು ಬರೆದ, ಈ ಶತಮಾನದ ಕನ್ನಡದ ದೊಡ್ಡ ಪ್ರತಿಭೆಯಾದ ಕುವೆಂಪು ಅವರನ್ನು ಯಾಕೆ ಆರಿಸಿಕೊಂಡಿಲ್ಲ?'' (ಅದೇ) ಎಂಬ ಪ್ರಶ್ನೆಯನ್ನೆತ್ತಿದ್ದಾರೆ. ಈ ಪ್ರಶ್ನೆ ಪ್ರಸ್ತುತ ಸಂಕಲನದ ಮಟ್ಟಿಗೆ ನೂರಕ್ಕೆ ನೂರರಷ್ಟು ಸಮರ್ಥನೀಯವಲ್ಲ. ಯಾಕೆಂದರೆ ಕುವೆಂಪುರವರ ಬಗ್ಗೆ ಇಲ್ಲಿ ಪ್ರತ್ಯೇಕ ಲೇಖನವಿಲ್ಲವಾದರೂ '' ಹೊಸಗನ್ನಡದ ಗದ್ಯ ಮತ್ತು ಪದ್ಯ'' ಎಂಬ ಲೇಖನದಲ್ಲಿ ಸೂರ್ಯೋದಯದ ಪ್ರತೀಕವನ್ನು ವಿವರಿಸುವ ಸಂದರ್ಭದಲ್ಲಿ ಕುವೆಂಪುರವರ

''ನವೀನ'' ಪದ್ಯವನ್ನು ಲೇಖಕರು ಉಲ್ಲೇಖಿಸುತ್ತಾರೆ. (ಪು. ೬೯-೭೦). ಪ್ರಸ್ತುತ ಸಂಕಲನದ ಲೇಖನಗಳಲ್ಲಿ ಕುರ್ತಕೋಟಿಯವರು ಜಾನಪದದಂಥ ಬಹುಮುಖೀ ಸಂಸ್ಕೃತಿಯನ್ನು ಒಳಗೊಳಿಸಿಲ್ಲವಾದರೂ ಇತರೆಡೆ ಅವರು ಜಾನಪದ ವಿಷಯಗಳಿಗೆ ಸಂಬಂಧಪಟ್ಟಂತೆಯೂ ತಮ್ಮ ಚಿಂತನೆಗಳನ್ನು ಹರಿಯಬಿಟ್ಟಿದ್ದಾರೆ. ಇಲ್ಲಿನ ಲೇಖನಗಳು ಮುಖ್ಯವಾಗಿ ನವೋದಯ ಕಾಲದ ಸಂಕ್ರಮಣಾವಸ್ಥೆಗೆ ಸಂಬಂಧ ಪಟ್ಟವುಗಳಾದ್ದರಿಂದ ಈ ಹೊತ್ತಿನ ಸಮಕಾಲೀನ ಸಾಹಿತ್ಯಿಕ ಸಾಂಸ್ಕೃತಿಕವಾದ ಮುಖ್ಯ ಸಂವಾದಗಳ ಪ್ರಸ್ತಾಪವನ್ನು ನಾವಿಲ್ಲಿ ಅಪೇಕ್ಷಿಸುವುದು ಸರಿಯಲ್ಲವೇನೊ![೧] ಆದರೂ ಪ್ರಸ್ತುತ ಕೃತಿಯ ಬಗ್ಗೆ ತರೀಕೆರೆಯವರೆತ್ತಿದ ಕೆಲವೊಂದು ಸಮಸ್ಯೆಗಳನ್ನು, ಮಿತಿಗಳನ್ನು ನಾವು ಪೂರ್ಣವಾಗಿ ಅಲ್ಲಗಳೆಯುವಂತಿಲ್ಲ.

ಇಲ್ಲಿನ ಕೊನೆಯ ಲೇಖನವಾದ ''ಜಡಭರತರ ಕನಸುಗಳಲ್ಲಿ ಹೊಸ ಕಾಣ್ಕೆ '' ೧೯೮೨ ರಲ್ಲಿ ಪ್ರಕಟವಾಗಿದ್ದ 'ವಿಮರ್ಶೆಯ ವಿನಯ: ಕಾದಂಬರಿ' ಎಂಬ ಕೃತಿಯಲ್ಲಿ ಈಗಾಗಲೇ ಸೇರ್ಪಡೆಯಾಗಿತ್ತು. ಅದನ್ನು ಮತ್ತೆ ಈ ಕೃತಿಯಲ್ಲೂ ಸೇರಿಸಿಕೆ. ಡಿದ್ದರ ಔಚಿತ್ಯ ಸ್ಪಷ್ಟವಾಗುತ್ತಿಲ್ಲ. ಒಟ್ಟಿನಲ್ಲಿ ಎಚ್. ಎಸ್. ರಾಘವೇಂದ್ರರಾಯರು ಅಭಿಪ್ರಾಯ ಪಡುವಂತೆ '' ಕುರ್ತಕೋಟಿಯವರ ಒಟ್ಟು ಬರಹದ ಹಾಗೆಯೇ 'ಬಯಲು- ಆಲಯ' ಕೂಡ ಒಂದು ವಿಶಿಷ್ಟ ರೀತಿಯ ಓದನ್ನು ಅಪೇಕ್ಷಿಸುತ್ತದೆ. ಅವರಿಗೆ ಪ್ರಿಯ ಕವಿಗಳಾದ ಬೇಂದ್ರೆ, ಕುಮಾರವ್ಯಾಸರಂತೆ ಕುರ್ತಕೋಟಿಯವರದೂ ವಿಮರ್ಶೆಯಲ್ಲಿ ದೇಸಿಯ ರೀತಿ. ಓದುಗನು ಅವರ ಜೊತೆಯಲ್ಲಿ ವಿಹಾರ ಮಾತ್ರೆ ಹೊರಟವನಂತೆ ವ್ಯವಹರಿಸುತ್ತಾ ಅವರು ತೋರಿಸುವ ಗಹನ ಸತ್ಯಗಳನ್ನು ದಾಖಲೆ ಮಾಡಿಕೊಳ್ಳುತ್ತಾ ಮುಂದುವರಿಯ ಬೇಕಾಗುತ್ತದೆ. ಆ ಮೇಲೆ ಅವೆಲ್ಲದರ ನಡುವಿನ ಸಂಬಂಧಗಳನ್ನು ಗುರುತಿಸಿ 'ಆಲಯ' ವನ್ನು ಕಟ್ಟಿಕೊಳ್ಳುವ ಹೊಣೆಗಾರಿಕೆ ಓದುಗನದೇ ಆಗಿರುತ್ತದೆ'' ( ಕನ್ನಡ ವಾರ್ಷಿಕ -೯೨; ಪು. ೧೪೬).

## ೧೨. ಬಾರೋ ಸಾಧನ ಕೇರಿಗೆ (೧೯೯೩)

ಈಗಾಗಲೇ ಬೇರೆ ಬೇರೆ ಕಡೆ, ಬೇರೆ ಬೇರೆ ಸಂದರ್ಭಗಳಲ್ಲಿ ಬೇಂದ್ರೆಯವರ ಬಗ್ಗೆ ಅವರ ಕೃತಿಗಳ ಬಗ್ಗೆ ಕುರ್ತಕೋಟಿಯವರು ಮಾಡಿದ ಉಪನ್ಯಾಸಗಳನ್ನೂ, ಪ್ರಕಟಿಸಿದ ಕಿರು ಹೊತ್ತಿಗೆಗಳನ್ನೂ, ಅದೇ ರೀತಿ ಪ್ರಸಂಗವಶದಿಂದ ಹುಟ್ಟಿಕೊಂಡ (ಬರೆದ) ಇನ್ನಿತರ ಕೆಲವು ಲೇಖನಗಳನ್ನೂ ಒಟ್ಟಾಗಿಸಿ ಇಲ್ಲಿ ಒಂದೇ ಪುಸ್ತಕ ರೂಪದಲ್ಲಿ ಹೊರ ತರಲಾಗಿದೆ. ಇದರಂತೆ ಇಲ್ಲಿನ '' ದ. ರಾ. ಬೇಂದ್ರೆ'' ( ಕಾವ್ಯ ಪ್ರತಿಭೆ) ಎಂಬ ಉಪನ್ಯಾಸ -ಲೇಖನ ೧೯೮೨ ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ' ಮನೆಗೊಂದು ಮಣಿದೀಪ' ಮಾಲೆಯಲ್ಲಿ ಪ್ರಕಟವಾಗಿತ್ತು. ''ಬೇಂದ್ರೆ ಹಾಗೂ ಕನ್ನಡ ಕಾವ್ಯ ಸ್ವರೂಪ'' ಎಂಬುದು ೧೯೬೧ರಲ್ಲಿ ಕಲ್ಬುರ್ಗಿಯ ಕನ್ನಡ ಸಾಹಿತ್ಯ ಸಂಘದಿಂದ ಕಿರು

---

೧. ಬೇರೆ ಸಂದರ್ಭಗಳಲ್ಲೂ ಕುರ್ತಕೋಟಿಯವರು ಸಮಕಾಲೀನ ಸಾಹಿತ್ಯಿಕ - ಸಾಂಸ್ಕೃತಿಕ ಸಂವಾದಗಳ ಬಗ್ಗೆ ವಿಶೇಷ ಆಸಕ್ತಿ ವಹಿಸಿದವರಲ್ಲ ಎಂಬಂಶವನ್ನು ನಾವು ತಿಳಿದಿರಬೇಕಾಗುತ್ತದೆ.

ಹೊತ್ತಿಗೆಯಾಗಿ ಹೊರಬಂದಿತ್ತು. ಶ್ರುತಿ, ಕೃತಿ, ಶಬ್ದ, ಚಲುವ, ಜೋಗಿ, ಮೊದಲಗಿತ್ತಿ ಮತ್ತು ಚಿಗರಿ ಗಂಗಳ ಚಲುವಿ, ಮರೆಯುವೆಯೋ ಅರಿಯುವೆಯೋ ಮತ್ತು ಎಲ್ಲಿರುವೆ ರಾಜಗಂಭೀರಾ, ಸ್ವರೂಪ- ದೀಪ, ಹಾಗೂ ಸಣ್ಣ ಸೋಮವಾರ -ಎಂಬ ಕಿರುಲೇಖನಗಳುಳ್ಳ ''ಭೃಂಗದ ಬೆನ್ನೇರಿ'' ಭಾಗವು ೧೯೭೫ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯಿಂದ ಅದೇ ಹೆಸರಿನಲ್ಲಿ ಪ್ರಕಟವಾಗಿತ್ತು. ''ಬೇಂದ್ರೆಯವರ ಕಾವ್ಯದಲ್ಲಿ ಶ್ರುತಿ ಮತ್ತು ಕೃತಿ ''ಎಂಬ ಲೇಖನ ೧೯೮೪ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕವಿದಿನಕ್ಕಾಗಿ ಮಾಡಿದ ಉಪನ್ಯಾಸವಾಗಿದ್ದು, ಅದೇ ವರ್ಷ ಅಲ್ಲಿನ ಪ್ರಸಾರಾಂಗದಿಂದ ಹೊರಬಂದಿತ್ತು. ''ಬೇಂದ್ರೆಯವರ ನಾಕುತಂತಿ''ಅವರಿಗೆ ಜ್ಞಾನ ಪೀಠ ಪ್ರಶಸ್ತಿ ದೊರೆತ ಸಂದರ್ಭದಲ್ಲಿ ಮಣಿಪಾಲದಲ್ಲಿ ಮುಡಿದ ಭಾಷಣ. ''ಮನೋಗತ '' ಪುಟ ಬಂಗಾರದ ೫ನೆ ಯ ಸಂಪುಟ (ಶ್ರಾವಣ ಪ್ರತಿಭೆ)ಕ್ಕೆ ಬರೆದ ಮುನ್ನಡಿ. ಉಳಿದ ಬರಹಗಳೆಲ್ಲಾ ಕುರ್ತಕೋಟಿಯವರೇ ಹೇಳುವಂತೆ ಪ್ರಸಂಗ ವಶದಿಂದ ಮೂಡಿ ಬಂದವುಗಳಾಗಿವೆ.

ಒಟ್ಟಿನಲ್ಲಿ ಬೇಂದ್ರೆಯವರ ಬಗೆಗೆ ಕೀರ್ತಿನಾಥರು ಕಾಲಕಾಲಕ್ಕೆ ಬರೆದ ಮಹತ್ವದ ಲೇಖನಗಳೂ, ನೀಡಿದ ಉಪನ್ಯಾಸಗಳೂ ಇಲ್ಲಿ ಒಂದೆಡೆ ಲಭ್ಯವಾಗುತ್ತವೆ.

ಬೇಂದ್ರೆ ಮತ್ತು ಕುಮಾರವ್ಯಾಸರು ಕುರ್ತಕೋಟಿಯವರಿಗೆ ಅತ್ಯಂತ ಪ್ರಿಯರಾದ ಕವಿಗಳು, ಹಾಗಾಗಿ ಈ ಇಬ್ಬರೂ ಕವಿಗಳ ಬಗೆಗೆ ಅಧಿಕಾರವಾಣಿಯಿಂದ ಮಾತನಾಡ ಬಲ್ಲಷ್ಟು, ಬರೆಯಬಲ್ಲಷ್ಟು ವಿಷಯ ಸಂಗ್ರಹ, ಪಾಂಡಿತ್ಯ ಕುರ್ತಕೋಟಿಯವರಲ್ಲಿದೆ. ಬೇಂದ್ರೆಯವರ ಕಾವ್ಯವನ್ನು ಅಧ್ಯಯನ ಮಾಡಬಯಸುವವರಿಗೆ ಕುರ್ತಕೋಟಿಯವರು ದಾರಿದೀಪವಾಗಬಲ್ಲರು. ಪ್ರಸ್ತುತ ಸಂಕಲನದಲ್ಲಿ ಬೇಂದ್ರೆಯವರ ಒಟ್ಟು ಕಾವ್ಯದ ಬಗೆಗೆ ಕುರ್ತಕೋಟಿಯವರು ತಾಳುವ ನಿಲುವು ಕವಿಯ ಕಾವ್ಯವನ್ನು ಅರ್ಥಮಾಡಿಕೊಳ್ಳುವ ನಿಟ್ಟಿನಲ್ಲಿ ಅತ್ಯಂತ ಮಹತ್ವದ್ದಾಗುತ್ತದೆ. ''ಸ್ವಾನುಭವವೇ ಆಗಿರಲಿ, ಲೋಕಾನುಭವವೇ ಆಗಿರಲಿ ಬೇಂದ್ರೆಯವರ ಕಾವ್ಯದ ಉದ್ದೇಶ ಆ ಅನುಭವವನ್ನು ಸಂಕೇತವಾಗಿಸಿ ಅದರ ಮೂಲಕ ಜೀವನದ ಆಳವಾದ ತಿಳುವಳಿಕೆಯನ್ನು ಪಡೆಯುವದಾಗಿದೆ. ಯಾವುದೇ ಅನುಭವ ತನ್ನ ವಿಶೇಷ ಮತ್ತು ಸಾಮಾನ್ಯವಾದ ಗುಣಧರ್ಮಗಳಿಂದ ಜೀವನ ರಹಸ್ಯವನ್ನು ಪ್ರಕಟಸುವಷ್ಟು ಪ್ರಾತಿನಿಧಿಕವಾದರೆ ಅದು ಬೇಂದ್ರೆಯವರ ಕಾವ್ಯದ ವಸ್ತುವಾಗಬಲ್ಲುದು. ಜೀವನದ ಹೆಚ್ಚಿನ ಪ್ರಜ್ಞೆಯನ್ನು ವೈಜ್ಞಾನಿಕ ಉಪಾಯಗಳಿಂದ ಪಡೆಯಬಹುದು. ದೊಡ್ಡ ಕವಿ ಯಾವ ಅನುಭವವನ್ನು ಕುರಿತು ಬರೆದರೂ ಮನುಷ್ಯ ಹೆಚ್ಚಿನ ತಿಳುವಳಿಕೆಗಾಗಿ ನಡೆಸಿದ ಹೋರಾಟವನ್ನೇ ಪ್ರತಿಬಿಂಬಿಸುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ ಬೇಂದ್ರೆಯವರು ಈ ಕಾಲದ ದೊಡ್ಡಕವಿಯಾಗಿ ಕಾಣುತ್ತಾರೆ. ಅವರ ಕಾವ್ಯ ಮನುಕುಲದ ಪ್ರಜ್ಞೆಯನ್ನೆಲ್ಲ ಮೈಗೂಡಿಸಿಕೊಂಡು ಮತ್ತೆ ಹೆಚ್ಚಿನ ಪ್ರಜ್ಞೆಗಾಗಿ ಹಾತೊರೆಯುವಂಥದ್ದು. ಈ ಪ್ರಯತ್ನ ಎಲ್ಲ ಕವಿತೆಗಳಲ್ಲಿಯೂ ಒಂದೇ ರೀತಿಯಲ್ಲಿ

---

೧.೧೯೯೦ ರಲ್ಲಿ ಪ್ರಕಟವಾದ 'ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ' ಎಂಬ ಕೃತಿಯಲ್ಲೂ ಇದು ಸೇರ್ಪಡೆಯಾಗಿದೆ.

ಯಶಸ್ವಿಯಾಗಿದೆಯೆಂದು ಹೇಳಲು ಬರುವಂತಿಲ್ಲ. ಆದರೆ ಪ್ರತಿಯೊಂದು ಕವಿತೆಯಲ್ಲಿ ಅವರು ಹೊಸದಾಗಿಯೇ ಪ್ರಯತ್ನಿಸುತ್ತಾರೆ. ಕಾವ್ಯವಸ್ತುವಿನಂತೆ ಪ್ರತಿಮೆ - ರೂಪಕಗಳನ್ನು , ಛಂದಸ್ಸನ್ನು, ಶಬ್ದಗಳನ್ನು ಬದಲಿಸಿ ಪ್ರಯೋಗ ಮಾಡುತ್ತಾರೆ. ಇದೆಲ್ಲದರ ಗುರಿ, ಪ್ರಯೋಜನವೆಂದರೆ ಹೊಸ ಪ್ರಜ್ಞೆಯ ಸೃಜನ ಶೀಲವಾದ ಆವಿಷ್ಕಾರ. ಹಳೆಯ ಪ್ರಜ್ಞೆಯನ್ನು ಮೈ ಗೂಡಿಸಿಕೊಂಡು ಹೊಸ ಪ್ರಜ್ಞೆ ಅವರ ಕಾವ್ಯದಲ್ಲಿ ಮೈತಳೆದಾಗ ಆದರ ಅಭಿವ್ಯಕ್ತಿಯ ರಮ್ಯತೆ ನಿಜವಾಗಿ ನವೋನವವಾಗುತ್ತದೆ. ಪ್ರಯತ್ನವಿಲ್ಲದೆ ಮಾತು ಭಾವದ ಮೂಲಕ ಹೊಸ ಅರ್ಥವನ್ನು ಪಡೆಯುತ್ತದೆ. (ಪು. ೧೭೨ -೧೭೩)ಎನ್ನುತ್ತಾರೆ. ಈ ವ್ಯಾಖ್ಯಾನಕ್ಕೆ ಪೂರಕವಾದ ವಿಶ್ಲೇಷಣೆಗಳೂ ಇಲ್ಲಿನ ಬರಹಗಳಲ್ಲಿವೆ.

## ೧೩. ಉರಿಯ ನಾಲಗೆ (೧೯೯೩)

'ಪ್ರಜಾವಾಣಿ' ಸಾಪ್ತಾಹಿಕ ಪುರವಣಿಯಲ್ಲಿ 'ಸಮ್ಮುಖ' ಎಂಬ ಶೀರ್ಷಿಕೆಯಲ್ಲಿ ಬರೆದ ಒಟ್ಟು ೫೫ ಅಂಕಣ ಬರಹಗಳನ್ನು ಸೇರಿಸಿ ಇಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಅಂಕಣ ಬರಹಗಳೆಂದ ಮೇಲೆ ಅವು ಸಾಮಾನ್ಯವಾಗಿ ವಿಷಯ ವೈವಿಧ್ಯದಿಂದ ಕೂಡಿರುತ್ತವೆ. ಸಮಕಾಲೀನವಾಗಿರುವುದರ ಜತೆಗೆ ಸಾರ್ವಕಾಲಿಕ ಚಿಂತನೆಗಳನ್ನೊಳಗೊಂಡಿರಬೇಕಾದುದೂ ಅಂಕಣ ಲೇಖನಗಳ ಮುಖ್ಯ ಗುಣಗಳಲ್ಲೊಂದು. ಇವೆಲ್ಲವನ್ನು ಪ್ರಸ್ತುತ ಸಂಕಲನದ ಬರಹಗಳಲ್ಲಿ ನಾವು ಕಾಣಬಹುದಾಗಿದೆ. ಪ್ರತಿಯೊಂದು ಲೇಖನದ ವಸ್ತು ವೈವಿಧ್ಯಮಯವಾಗಿದ್ದರೂ ''ಅವುಗಳ ಹಿಂದಿನ ಚಿಂತನೆಯ ಕ್ರಮ ಏಕಸತ್ರವಾಗಿರುವಂತೆ ನೋಡಿಕೊಳ್ಳಲಾಗಿದೆ'' ಎಂದು ಮೊದಲ ಮಾತಲ್ಲಿ ಲೇಖಕರೇ ಹೇಳಿಕೊಂಡಿದ್ದಾರೆ.

ಇಲ್ಲಿನ ಬರಹಗಳು ಯಾವುದೇ ವಿಷಯಕ್ಕೆ ಸಂಬಂಧಪಟ್ಟವುಗಳಾಗಿರಲಿ, ಅಲ್ಲೆಲ್ಲಾ ವಿಮರ್ಶೆಯ ಧಾಟಿ ಕಂಡು ಬರುತ್ತದೆ. ಕುರ್ತಕೋಟಿಯವರು ಓರ್ವ ಸೂಕ್ಷ್ಮಪ್ರಜ್ಞೆಯ ವಿಮರ್ಶಕರಾಗಿರುವುದೇ ಇದಕ್ಕೆ ಕಾರಣವೆನ್ನಬಹುದು. ಇಲ್ಲಿ ಸಂಸ್ಕೃತಿ ಚಿಂತನೆಯಿದೆ. ಜತೆಗೆ ಸಾಹಿತ್ಯಿಕ ಚರ್ಚೆಯೂ ಇದೆ. ಸಾಹಿತ್ಯ ಚರ್ಚೆಗೆ ಅಂಕಣ ಬರಹದಲ್ಲಿ ಅವಕಾಶವಿಲ್ಲವೆನ್ನುವಂತಿಲ್ಲ. ಮೊದಲೇ ನೋಡಿದಂತೆ ಅಂಕಣ ಲೇಖನಗಳ ವಿಷಯ ವೈವಿಧ್ಯಮಯವಾಗಿರುತ್ತದೆ. ಅದು ಸಾಹಿತ್ಯಕೃತಿಯೊಂದರ ಚರ್ಚೆಯಿರಬಹುದು; ವ್ಯಕ್ತಿವಿಷಯವಾಗಿರಬಹುದು; ಸಮಕಾಲೀನ ವಿದ್ಯಮಾನಗಳ ಬಗೆಗಿನ - ಸಮಸ್ಯೆಗಳ ಬಗೆಗಿನ - ಪ್ರತಿಕ್ರಿಯೆಯಾಗಿರಬಹುದು; ಪುರಾಣ-ಇತಿಹಾಸಗಳ ಮೌಲ್ಯಗಳನ್ನು ವರ್ತಮಾನದ ಬೆಳಕಿನಲ್ಲಿಟ್ಟು ತೂಗಿ ನೋಡಿದುದಾಗಿರಬಹುದು - ಹೀಗೆ ಯಾವುದೇ ವಿಷಯವಾದರೂ ಅಂಕಣಬರಹದ ತೆಕ್ಕೆಗೆ ಒಳಪಡುತ್ತದೆ. 'ಉರಿಯ ನಾಲಗೆ'ಯಲ್ಲಿ ಕೂಡ ಈ ಎಲ್ಲಾ ರೀತಿಯ ಬರಹಗಳಿವೆ. ಭಾಷೆ, ಸಾಹಿತ್ಯ, ಸಂಸ್ಕೃತಿ, ಜಾನಪದ, ಕಲೆ, ಹಬ್ಬ-ಆಚರಣೆ, ಶಿಲ್ಪ, ಕಾವ್ಯಮೀಮಾಂಸೆ, ಪುರಾಣ, ಸಿನೆಮಾ, ರಾಜಕೀಯ, ಸಮಕಾಲೀನ ವಿದ್ಯಮಾನ - ಇವೆಲ್ಲವುಗಳ ಕುರಿತ ಚರ್ಚೆ ಇಲ್ಲಿದೆ. ವ್ಯಕ್ತಿ ಚಿತ್ರಗಳೂ ಸೇರಿಕೊಂಡಿವೆ.

ಒಟ್ಟಿನಲ್ಲಿ ರಹಮತ್ ತರೀಕೆರೆ ಯವರಂದಂತೆ ಇಲ್ಲಿನ ಬರಹಗಳ ವಸ್ತು ''ಗತಕಾಲದ ಪುರಾಣಗಳಿಂದ ಹಿಡಿದು ವರ್ತಮಾನದ ಸಿನಿಮಾ, ಋತುಗಳು, ಹಬ್ಬಗಳ ತನಕ ಹರಡಿಕೊಂಡಿದೆ.'' [ಪುಸ್ತಕ ಮಾಹಿತಿ; ೧- ೧೧; ಪು. ೬]

''ಅಯೋಧ್ಯೆ ಸಂತೇತದ ಗೆಲವು'' ಎಂಬ ಲೇಖನದಲ್ಲಿ ವರ್ತಮಾನದ ವಿದ್ಯಮಾನಗಳ (ಅಯೋಧ್ಯೆಯ ಪ್ರಕರಣ - ಕೋಮುಗಲಭೆ) ಕುರಿತು ಚರ್ಚಿಸುವಾಗ ''ಅಣ್ಣ-ತಮ್ಮಂದಿರಂಥ ಶತ್ರುಗಳು ಬೇರೆ ಇಲ್ಲ ಎಂದು ಮೊದಲು ತಿಳಿದುಕೊಂಡ ಜನಾಂಗ ನಮ್ಮದಾಗಿದೆ. ದೇವತೆಗಳು - ದಾನವರು; ಕೌರವರು-ಪಾಂಡವರು - ಇವರ ಯುದ್ಧಗಳು ನಮ್ಮ ನೆನಪಿನಿಂದ ಮಾಸಿಹೋಗಿಲ್ಲ. ಜಗತ್ತಿನ ಉಳಿದ ಸಂಸ್ಕೃತಿಗಳಲ್ಲಿ ಪರಕೀಯನಾದವನು ಶತ್ರುವಾಗುತ್ತಿದ್ದ. ಆದರೆ ನಮ್ಮಲ್ಲಿ ಮಾತ್ರ ಸ್ವಜನರೂ ಶತ್ರುಗಳಾಗುತ್ತಾರೆ. ಅಥವಾ ಸ್ವಜನರಾದ್ದರಿಂದಲೇ ಶತ್ರುಗಳಾಗುತ್ತಾರೆ'' (ಉ.ನಾ. ಪು. ೨೨೧-೨೨೨) ಎಂದು ಹೇಳುತ್ತಾರೆ. ಈ ಮಾತುಗಳಲ್ಲಿ ಭೂತ-ವರ್ತಮಾನಗಳ ಅರ್ಥವತ್ತಾದ ಬೆಸುಗೆಯಿದೆ. ಆದರೆ ವರ್ತಮಾನದ ಘಟನಾವಳಿಗಳನ್ನು ಸಮರ್ಥಿಸಲು ಇಲ್ಲಿ ಪುರಾಣದ ಸಂಗತಿಗಳನ್ನು ಬಳಸುವುದಿಲ್ಲ. ಸಮಸ್ಯೆಯ ವಿಮರ್ಶೆಯ ಜತೆಗೆ ಭಾರತೀಯರೆಲ್ಲರೂ ಒಂದೇ ಕುಟುಂಬದವರೆಂಬ ಲೇಖಕರ ಆಶಯ ನಮಗಿಲ್ಲಿ ಮುಖ್ಯವಾಗುತ್ತದೆ.

ವೃತ್ತಪತ್ರಿಕೆಯೊಂದನ್ನು ಸಾಮಾನ್ಯ ಓದುಗರಿಂದ ಹಿಡಿದು ಗಂಭೀರ ಚಿಂತಕರ ವರೆಗೆ ಎಲ್ಲರೂ ಓದುತ್ತಾರೆ. ಹಾಗಾಗಿ ಅಂತಹ ಪತ್ರಿಕೆಯ ಅಂಕಣ ಬರಹಗಳಲ್ಲಿ ರಂಜನೀಯ ಸಂಗತಿಗಳಿದ್ದಂತೆ ಗಂಭೀರ ವಿಚಾರಗಳೂ ಇರುತ್ತವೆ. 'ಉರಿಯ ನಾಲಗೆ'ಯಲ್ಲಿ ಈ ಎರಡೂ ಬಗೆಯ ಬರಗಳನ್ನು ನಾವು ಕಾಣಬಹುದು. ಗಂಭೀರ ಚಿಂತನೆಯ ಬರವಣಿಗೆಗಳೇ ಹೆಚ್ಚಿನ ಪ್ರಮಾಣದಲ್ಲಿವೆಯೆಂದರೂ ತಪ್ಪಾಗದು. ರಹಮತ್ ತರೀಕರೆಯವರು ಅಭಿಪ್ರಾಯ ಪಡುವಂತೆ ''ಕುರ್ತುಕೋಟಿಯವರ ಸಂಸ್ಕೃತಿ ಚಿಂತನೆಯೆಂದರೆ ಅದು ಸಾಹಿತ್ಯ ವಿಮರ್ಶೆಯೇ! ಅವರ ಸಾಹಿತ್ಯ ವಿಮರ್ಶೆಯೆಂದರೆ ಅದು ಸಂಸ್ಕೃತಿ ಚಿಂತನೆ ಕೂಡ.'' (ಪುಸ್ತಕ ಮಾಹಿತಿ: ೧-೧೧; ಪು. ೭). ಎಚ್.ಎಸ್. ರಾಘವೇಂದ್ರರಾಯರು ಹೇಳುವಂತೆ ' ಉರಿಯನಾಲಗೆ' ರಚನೆಯಾಗಿರುವುದು ''ಹರಿಯುವ ನೀರಿನ ದಿಕ್ಕನ್ನು ಬದಲಾಯಿಸಲೆಂದು ಅಲ್ಲ. ಇದುವರೆಗೆ ಅದು ಹರಿದ ದಾರಿಯನ್ನು ದಾಖಲು ಮಾಡಲೆಂದು'' (ಪು. ಮಾ. ೨-೧; ಪು. ೫). ಆದರೆ ನೀರು ಈಗ ಹರಿಯುತ್ತಿರುವ ಮಾರ್ಗದ ಅಂಕು-ಡೊಂಕುಗಳನ್ನೂ ಹೇಳುವ ಲೇಖಕರ ಚಿಂತನಾಕ್ರಮದ ಹಿಂದೆ ಅದು ನೇರ್ಪಾದರೆ ಒಳ್ಳೆಯದೆಂಬ ಆಶಯ ಇರಲಾರದೆಂದು ಹೇಗೆ ಹೇಳೋಣ!

ಇದರಲ್ಲಿ ''ಉರಿಯ ನಾಲಗೆ'' ಯೆಂಬುದು ಒಂದು ಲೇಖನವಾಗಿದ್ದು, ಒಟ್ಟಿನ ಸಂಕಲನಕ್ಕೂ ಅದೇ ಹೆಸರನ್ನು ಕೊಡಲಾಗಿದೆ. ಇದು ಲೇಖಕರ ಆಶಯವೇನೆಂಬುದನ್ನು ಸೂಚಿಸುತ್ತದೆ.

## ಅನುವಾದ

ಕನ್ನಡದ ಜತೆಗೆ ಕುರ್ತುಕೋಟಿಯವರು ಸಂಸ್ಕೃತ, ಮರಾಠಿ, ಗುಜರಾತಿ, ಹಿಂದಿ, ಇಂಗ್ಲಿಷ್ ಮುಂತಾದ ಭಾಷೆಗಳಲ್ಲೂ ಪ್ರಾವೀಣ್ಯವನ್ನು ಗಳಿಸಿಕೊಂಡವರು; ಆ ಭಾಷೆಗಳಲ್ಲೂ ಬರೆಯಬಲ್ಲ ಸಾಮರ್ಥ್ಯವುಳ್ಳವರು. ಒಂದು ಭಾಷೆಯಿಂದ ಇನ್ನೊಂದಕ್ಕೆ ಸಮರ್ಥವಾಗಿ ಅನುವಾದ ಮಾಡುವಷ್ಟರಮಟ್ಟಿಗೆ ಅವರು ಈ ಎಲ್ಲಾ ಭಾಷೆಗಳ ಮೇಲೆ ಹಿಡಿತವನ್ನು ಸಾಧಿಸಿಕೊಂಡಿದ್ದಾರೆ. ''ಅನುವಾದ ನಾವು ತಿಳಿದುಕೊಂಡಿರುವಷ್ಟು ಸುಲಭವಾದ ಕಲೆಯೇನಲ್ಲ. ಒಂದು ಭಾಷೆಯ ಅರ್ಥವನ್ನು ಇನ್ನೊಂದು ಭಾಷೆಗೆ ಎರಕ ಹೊಯ್ಯುವದು ಮಾತ್ರ ಅನುವಾದವಲ್ಲ. ಅದು ಒಂದು ದೃಷ್ಟಿಯಿಂದ ಸಾಂಸ್ಕೃತಿಕ ಪರಕಾಯ ಪ್ರವೇಶ........ ಅನುವಾದವೆಂದರೆ ಇನ್ನೊಂದು ಭಾಷೆಯ ಮೂಲಕವಾಗಿ ಆಗುವ ಅರ್ಥಬೋಧವಲ್ಲ. ಅದು ಇನ್ನೊಂದು ಭಾಷೆಯ ಅವಯವಗಳಲ್ಲಿ ಬೆಳೆದು ಬರುವ ಅರ್ಥ ನಿರ್ಮಾಣವೂ ಹೌದು. ಆದ್ದರಿಂದ ಅನುವಾದ ಕಾರ್ಯದಲ್ಲಿ ತತ್ಸಮವಾದರೂ ಭಿನ್ನವಾದ ಶಬ್ದಗಳ, ಪ್ರತಿಮೆಗಳ, ಅರ್ಥದ ಘಟಕಗಳ ಬಳಕೆ ಅವಶ್ಯವಾಗಿದೆ.'' (ಚು.ಶೇ.ರಾ. ಶಾಕುಂತಲ ನಾಟಕ; ಎರಡು ಮಾತು; vi-vii) -ಎಂಬ ಕುರ್ತಕೋಟಿಯವರ ಮಾತಿನಿಂದಲೇ ಅನುವಾದ ಕಾರ್ಯವೂ ಹೇಗೆ ಸೃಜನಾತ್ಮಕ ವಾದುದೆಂಬುದನ್ನು ನಾವು ಕಂಡುಕೊಳ್ಳಬಹುದಾಗಿದೆ. ಸ್ವತಃ ಕುರ್ತುಕೋಟಿಯವರೂ ಇಂತಹ ಸೃಜನಶೀಲ ಅನುವಾದಕರಲ್ಲೊಬ್ಬರು. ಅವರ 'ಮರ್‍ಹಾಟೀ ಸಂಸ್ಕೃತಿ- ಕೆಲವು ಸಮಸ್ಯೆಗಳು', ' ಸ್ವಪ್ನನಾಟಕ' ಇತ್ಯಾದಿ ಕೃತಿಗಳು ಈ ದೃಷ್ಟಿಯಿಂದ ನಮಗೆ ಬಹಳ ಮುಖ್ಯವಾಗುತ್ತವೆ.

### ೧. ಮರ್‍ಹಾಟೀ ಸಂಸ್ಕೃತಿ - ಕೆಲವು ಸಮಸ್ಯೆಗಳು

ಶಂ.ಬಾ. ಜೋಶಿಯವರ ಮರಾಠಿ ಮೂಲದ ಅನುವಾದವಾಗಿರುವ ಈ ಕೃತಿಗೆ ಅನುವಾದಕ್ಕಾಗಿರುವ ೧೯೬೩ರ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ. ''ಈ ಕೃತಿ ಮೂಲತಃ ಒಂದು ಗಂಭೀರವಾದ ಸಾಂಸ್ಕೃತಿಕ ಅಧ್ಯಯನ. ಇದರಲ್ಲಿ ಮರ್‍ಹಾಟೀ ಮತ್ತು ಕನ್ನಡ ಸಂಸ್ಕೃತಿಗಳ ನಡುವಣ ಅನ್ಯೋನ್ಯ ಸಂಬಂಧ ಮತ್ತು ಆ ಸಂಸ್ಕೃತಿಗಳ ಮುಖಾಮುಖಿಯನ್ನು ಅನೇಕ ಒಳ ನೋಟಗಳೊಂದಿಗೆ ಮಂಡಿಸಿರುವ ಕ್ರಮವು ಅನನ್ಯ ರೀತಿಯದಾಗಿದೆ. ಸುಮಾರು ನಾಲ್ಕು ದಶಕಗಳ ಹಿಂದೆ ಈ ಕೃತಿ ಮರ್‍ಹಾಟಿಯಲ್ಲಿ ಪ್ರಕಟವಾದಾಗ ಅದು ಎಬ್ಬಿಸಿದ ಪ್ರತಿಕ್ರಿಯೆ ಹಾಗೂ ಕೋಲಾಹಲಗಳು ಶಂ.ಬಾ. ಜೋಶಿಯವರ ನಿಷ್ಠುರವಾದ ವೈಚಾರಿಕ ನಿಲುವಿಗೆ ಸಾಕ್ಷಿಯಾಗಿದೆ''- ಎಂಬುದಾಗಿ ಅಧ್ಯಕ್ಷರ ಮಾತಲ್ಲಿ ಜಿ.ಎಸ್. ಶಿವರುದ್ರಪ್ಪನವರು ಕೃತಿಯ ಮಹತ್ವವನ್ನು ಹೇಳಿದ್ದಾರೆ.

ಇಂತಹ ಮಹತ್ವದ ಕೃತಿಯನ್ನು ಕುರ್ತಕೋಟಿಯವರು ಸುಲಭ ಗ್ರಾಹ್ಯವಾಗುವ ರೀತಿಯಲ್ಲಿ ಕನ್ನಡಕ್ಕೆ ತಂದಿದ್ದಾರೆ. ಈ ಮೂಲಕ ಮರಾಠಿ-ಕನ್ನಡ ಉಭಯ ಭಾಷೆಗಳ ಸ್ನೇಹಸೇತುವಾಗಿದ್ದಾರೆ.

ಕುರ್ತುಕೋಟಿಯವರು ಮೂಲತಃ ಸೃಜನಶೀಲ ಪ್ರತಿಭೆಯವರಾಗಿರುವುದರಿಂದ ಅವರ ನಿರೂಪಣಾ ಶೈಲಿ ಸುಲಲಿತವೂ, ಹೃದ್ಯವೂ ಆಗಿದೆಯೆನ್ನಭಹುದು. ಮೂಲ ಕೃತಿ ಪ್ರಕಟವಾದಾಗ ಅದರಲ್ಲಿನ ವಿಚಾರಗಳು ಮರಾಠಿಗರಲ್ಲಿ ಕೋಲಾಹಲದ ಅಲೆಯೆನ್ನೆಬ್ಬಿಸಿದುದು ಇತಿಹಾಸದ ಕಟುವಾಸ್ತವವನ್ನು ನಮ್ಮ ಜನ ಹೇಗೆ ಸ್ವೀಕರಿಸುತ್ತಾರೆಂಬುದಕ್ಕೆ ಉದಾಹರಣೆಯಾಗುತ್ತದೆ. ಆದರೆ ಮೂಲ ಕೃತಿಯಲ್ಲಾಗಲಿ ಅದರ ಕನ್ನಡಾನುವಾದದಲ್ಲಾಗಲಿ ಉಭಯರೂ ಸ್ನೇಹಶೀಲರಾಗಿ ಬಾಳಬೇಕೆಂಬ ಒತ್ತಾಸೆಯಿರುವುದಂತೂ ಸ್ಪಷ್ಟ.

**೨. ಸ್ವಪ್ನನಾಟಕ (ಅಪ್ರಕಟಿತ)**

ಭಾಸನು ಸಂಸ್ಕೃತದಲ್ಲಿ ಬರೆದ 'ಸ್ವಪ್ನವಾಸವದತ್ತಾ' ನಾಟಕದ ಅನುವಾದವಿದು. ವತ್ಸದೇಶದ ದೊರೆ ಉದಯನ ಮತ್ತು ಉಜ್ಜಯಿನಿಯ ರಾಜಕುಮಾರಿ ವಾಸವದತ್ತೆಯರ ಪ್ರೀತಿ - ವಿರಹಗಳು ಪ್ರಸ್ತುತ ನಾಟಕದ ಮುಖ್ಯ ವಸ್ತು. ಜತೆಗೆ ಮಂತ್ರಿ ಯೌಗಂಧರಾಯಣನ ಸಮರ್ಥ ರಾಜನೀತಿಯೂ ಇಲ್ಲಿ ಪ್ರಕಟವಾಗಿದೆ. ಕನಸು ವಾಸ್ತವವಾಗಿಯೂ ವಾಸ್ತವ ಕನಸಾಗಿಯೂ ಭಾಸವಾಗುವುದು ಈ ನಾಟಕದ ವೈಶಿಷ್ಟ್ಯವಾಗಿದೆ. ಇಲ್ಲಿನ ಪಾತ್ರಗಳು ಹಲವು ಬಾರಿ ಹೇಳಿಕೊಳ್ಳುವಂತೆ. 'ಒಂದಿದ್ದದ್ದು ಇನ್ನೊಂದಾಗುವುದು' ಈ ನಾಟಕದ ಒಂದು ಕೇಂದ್ರ ಪ್ರತಿಮೆಯಾಗಿದೆ. ಇಂತಹ ಪ್ರಕ್ರಿಯೆಯ ಮೂಲಕ ಪ್ರತಿಯೊಂದು ಪಾತ್ರವೂ ತನ್ನದಲ್ಲದ ಇನ್ನೊಂದು ಸ್ಥಿತಿಯನ್ನು ಸ್ವತಃ ಅನುಭವಿಸಿ ಮತ್ತೆ ತನ್ನತನಕ್ಕೆ ಮರಳುತ್ತದೆ. ಸಂಸ್ಕೃತ ನಾಟಕ ಮೀಮಾಂಸೆಯ ಪ್ರಕಾರ ಒಬ್ಬ ಸಹೃದಯ ಪ್ರೇಕ್ಷಕ ನಾಟಕವೊಂದನ್ನು ನೋಡಿದಾಗ ಅನುಭವಿಸುವಂತಹ ರಸನಿಷ್ಪತ್ತಿಯ ಪ್ರಕ್ರಿಯೆ ಈ ನಾಟಕದ ಸಂರಚನೆಯಲ್ಲಿ ಅಡಕವಾಗಿದೆ. ಅದಕ್ಕಾಗಿಯೇ ಕೀರ್ತಿನಾಥ ಕುರ್ತುಕೋಟಿಯವರು ಇದನ್ನು ಅನುವಾದಿಸುತ್ತಾ ಈ ನಾಟಕವು ''ಸಂಸ್ಕೃತ ಕಾವ್ಯಮೀಮಾಂಸೆಗೇ ಒಂದು ರೂಪಕವಿದ್ದ ಹಾಗೆ'' ಎಂದು ವರ್ಣಿಸಿದ್ದಾರೆ.

ಇಂದಿಗೂ ಅತ್ಯಂತ ಆಧುನಿಕವೆಂದು ಕಾಣುವ ಇಂಥ ಪ್ರತಿಮಾ ವಿಶೇಷವನ್ನೇ ಕುರ್ತಕೋಟಿಯವರ ಅನುವಾದವು ಕೇಂದ್ರವಾಗಿರಿಸಿಕೊಂಡಿದೆಯೆನ್ನಬಹುದು. ಈ ಪ್ರತಿಮಾ ವಿಶೇಷವನ್ನು ಸೂಕ್ಷ್ಮವಾಗಿ ರೂಪಾಂತರಿಸಿಕೊಂಡು ಸಮಕಾಲೀನ ಗೊಳಿಸಿಕೊಳ್ಳುವ ಪ್ರಯತ್ನವೂ ಪ್ರಸ್ತುತ ಅನುವಾದ ಕಾರ್ಯದ ಮೂಲಕ ನಡೆದಿದೆಯೆನ್ನಬಹುದು. ಇದರಿಂದಲಾಗಿಯೇ ಕುರ್ತಕೋಟಿಯವರದು ಒಂದು ಸೃಜನಶೀಲ ಅನುವಾದವಾಗುತ್ತದೆ. ಈ ನಾಟಕವು ಮುದ್ರಣಗೊಂಡು ಪ್ರಕಟವಾಗಿಲ್ಲವಾದರೂ 'ನೀನಾಸಂ' ತಂಡದಿಂದ ಯಶಸ್ವೀ ಪ್ರದರ್ಶನವನ್ನು ಕಂಡಿದೆ. ಜನಮನ್ನಣೆಯನ್ನೂ ಗಳಿಸಿದೆ.

# ಸಂಪಾದಿತ ಕೃತಿಗಳು

ಕೀರ್ತಿನಾಥ ಕುರ್ತಕೋಟಿಯವರು ಧಾರವಾಡದ ಮನೋಹರ ಗ್ರಂಥ ಮಾಲೆಯ ಜಿ.ಬಿ. ಜೋಶಿಯವರ ಜತೆ ಸೇರಿ ಕೆಲವು ಮೌಲಿಕ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಅವುಗಳಲ್ಲಿ 'ನಡೆದು ಬಂದ ದಾರಿ' ಮತ್ತು 'ಪುಟ ಬಂಗಾರ'ಎಂಬ ಬೃಹತ್ ಸಾಹಿತ್ಯ ಸಂಪುಟಗಳೂ, 'ಮನ್ವಂತರ'ಎಂಬ ಸಾಹಿತ್ಯ ಪತ್ರಿಕೆಯೂ, 'ವಾಸುದೇವ ಪ್ರಶಸ್ತಿ'ಯೆಂಬ ಅಭಿನಂದನ ಗ್ರಂಥವೂ ಪ್ರಧಾನವಾದವುಗಳು.

**೧. ನಡೆದು ಬಂದ ದಾರಿ . (೧೯೫೮)**

ಮನೋಹರ ಗ್ರಂಥ ಮಾಲೆಯ ಬೆಳ್ಳಿಹಬ್ಬದ (೧೯೫೮) ಸವಿ ನೆನಪಿಗಾಗಿ ಮೂರು ಸಂಪುಟಗಳಲ್ಲಿ ಪ್ರಕಟವಾದ ಬೃಹತ್ ಸಾಹಿತ್ಯ ಸಂಪುಟವಿದು. ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಜೊತೆಗೆ ಕುರ್ತಕೋಟಿಯವರು ಬರೆದ ಬೆಲೆಯುಳ್ಳ ಇತಿಹಾಸ ಪ್ರಬಂಧಗಳೂ ಸೇರಿ ಈ ಸಂಪುಟಗಳು ಪ್ರಕಟಗೊಂಡಿವೆ. ಅವುಗಳಲ್ಲಿ ಕುರ್ತಕೋಟಿಯವರು ಬರೆದ ಇತಿಹಾಸ ಪ್ರಬಂಧಗಳೆಲ್ಲಾ ನಂತರದಲ್ಲಿ(೧೯೬೨) 'ಯುಗಧರ್ಮ ಹಾಗೂ ಸಾಹಿತ್ಯದರ್ಶನ' ಎಂಬ ಹೆಸರಿನ ಪುಸ್ತಕವಾಗಿ ಹೊರಬಂದಿವೆ.

**೨. ಪುಟ ಬಂಗಾರ (೧೯೮೫-೮೭)**

ಮನೋಹರ ಗ್ರಂಥಮಾಲೆಯ ಸುವರ್ಣ ಮಹೋತ್ಸವದ ನೆನಪಿಗಾಗಿ ಐದು ಸಂಪುಟಗಳಲ್ಲಿ ಹೊರತರಲಾದ ಬೃಹತ್ ಸಾಹಿತ್ಯ ಸಂಪುಟವಿದು. ಸಣ್ಣಕತೆ, ಕಾದಂಬರಿ, ಏಕಾಂಕ, ಹರಟೆ, ವ್ಯಕ್ತಿ ಚಿತ್ರ, ವಿಮರ್ಶೆ ಇತ್ಯಾದಿ ಅನ್ಯಾನ್ಯ ಸಾಹಿತ್ಯ ಪ್ರಕಾರಗಳೊಂದಿಗೆ ಕುರ್ತಕೋಟಿಯವರ ಪ್ರದೀರ್ಘ ಮುನ್ನುಡಿಗಳೂ ಸೇರಿ ಪ್ರಸ್ತುತ ಸಂಪುಟಗಳು ಪ್ರಕಟವಾಗಿವೆ. ''ಶ್ರಾವಣ ಪ್ರತಿಭೆ''ಯೆಂಬ ೫ ನೆಯ ಸಂಪುಟದಲ್ಲಿ ಬೇಂದ್ರೆಯವರ ಆಯ್ದ ೧೦೦ ಕವಿತೆಗಳಿಗೆ ಕುರ್ತಕೋಟಿಯವರು ಮತ್ತು ವಾಮನ ಬೇಂದ್ರೆಯವರು ನೀಡಿದ ಅರ್ಥ ವಿವೇಚನೆಯಿದೆ. ಈ ಸಂಪುಟಗಳಿಗೆ ಕುರ್ತಕೋಟಿಯವರು ಬರೆದ ಮುನ್ನುಡಿಗಳನ್ನೆಲ್ಲಾ ಒಂದೆಡೆ ಸೇರಿಸಿ ೧೯೯೦ ರಲ್ಲಿ '' ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ''ಎಂಬ ಪುಸ್ತಕವೊಂದನ್ನು ಹೊರತರಲಾಗಿದೆ.

**೩. ಮನ್ವಂತರ (೧೯೬೩-೬೮)**

ಮನೋಹರ ಗ್ರಂಥಮಾಲೆಯಿಂದ ಐದು ವರ್ಷಗಳ ಕಾಲ ಪ್ರಕಟವಾದ 'ಮನ್ವಂತರ' ವೆಂಬ ಷಣ್ಮಾಸಿಕ (ಅನಿಯತಕಾಲಿಕೆ)ಕ್ಕೆ ಕುರ್ತಕೋಟಿಯವರೇ ಜೀವಾಳ.

ಜಿ. ಬಿ. ಜೋಶಿಯವರ ಜೊತೆಗೆ ಸಂಪಾದಕರಾಗಿದ್ದುಕೊಂಡು 'ಸಮೀಕ್ಷಕ'ಎಂಬ ಹೆಸರಲ್ಲಿ ಆಗಾಗ ಮೌಲಿಕ ಪುಸ್ತಕಗಳನ್ನು ಸಮೀಕ್ಷಿಸುತ್ತಾ, ಪತ್ರಿಕೆಯ ಗುಣಮಟ್ಟವನ್ನು ವೃದ್ಧಿಸಿದವರು ಕುರ್ತಕೋಟಿಯವರು. 'ನಾಟಕಾಂಕ' ವೆಂಬ ಹೆಸರಿನಿಂದ ಬಂದ ಪತ್ರಿಕೆಯ ೫ ನೆಯ ಮತ್ತು ೬ನೆಯ ಸಂಯುಕ್ತ ಸಂಪುಟದಲ್ಲಿ ಸಂಸ್ಕೃತ ಹಾಗೂ ಕನ್ನಡ ನಾಟಕಗಳಿಗೆ ಸಂಬಂಧಪಟ್ಟ ಕುರ್ತಕೋಟಿಯವರ ನಾಲ್ಕು ಮೌಲಿಕ ಲೇಖನಗಳು ಪ್ರಕಟವಾಗಿವೆ. 'ಮನ್ವಂತರ'ದಲ್ಲಿ ಕಾಲ ಕಾಲಕ್ಕೆ ಪ್ರಕಟವಾದ ಕುರ್ತಕೋಟಿಯವರ ''ನವ್ಯಕಾವ್ಯ ಪ್ರಯೋಗ'', ''ಹೊಸಗನ್ನಡದಲ್ಲಿ ಮಹಾಕಾವ್ಯ : ಶ್ರೀ ರಾಮಾಯಣ ದರ್ಶನಂ'' ಇತ್ಯಾದಿ ದೀರ್ಘ ಪ್ರಬಂಧಗಳು ಮುಂದೆ ಪ್ರತ್ಯೇಕ ಕೃತಿಗಳಾಗಿಯೂ ಹೊರ ಬಂದಿವೆ.

**೪. ವಾಸುದೇವ ಪ್ರಶಸ್ತಿ(೧೯೬೪)**

ಹೊಸಗನ್ನಡದ ಆರಂಭಕಾಲದ ಸಾಹಿತಿಗಳಲ್ಲೊಬ್ಬರಾದ ಕೆರೂರು ವಾಸುದೇವಾಚಾರ್ಯರ ಅಭಿನಂದನ ಗ್ರಂಥವಿದು. ಕುರ್ತಕೋಟಿಯವರು ಇದನ್ನು ಸಂಪಾದಿಸುವುದರ ಜತೆಗೆ ವಾಸುದೇವಾಚಾರ್ಯರ ಸ್ವತಂತ್ರ ಹಾಗೂ ಅನುವಾದಿತ ನಾಟಕಗಳ ಬಗೆಗೂ, ಕಾದಂಬರಿಗಳ ಬಗೆಗೂ ಉಪಯುಕ್ತ ಲೆಖನಗಳನ್ನೂ ಬರೆದಿದ್ದಾರೆ. ಈ ಲೇಖನಗಳು ನಂತರದಲ್ಲಿ 'ವಿಮರ್ಶೆಯ ವಿನಯ- ನಾಟಕ' ಮತ್ತು 'ವಿಮರ್ಶೆಯ ವಿನಯ -ಕಾದಂಬರಿ' ಎಂಬ ಕೃತಿಗಳಲ್ಲೂ ಸೇರ್ಪಡೆಯಾಗಿವೆ.

**೫. The Tradition of Kannada Theatre (1986)**

ಕರ್ನಾಟಕದ ರಂಗಭೂಮಿ ಹಾಗೂ ನಾಟಕ ಪರಂಪರೆಯ ಕುರಿತು ವಿವರಿಸುವ ಈ ಆಂಗ್ಲ ಗ್ರಂಥವನ್ನು ಕುರ್ತಕೋಟಿಯವರು ಕರ್ನಾಟಕ ನಾಟಕ ಅಕಾಡೆಮಿಗಾಗಿ ಸಂಪಾದಿಸಿಕೊಟ್ಟಿದ್ದಾರೆ. ಇದರಲ್ಲಿ ಕುರ್ತಕೋಟಿಯವರೇ ಬರೆದ ''Kannada Drama - A Brief Survey ''ಎಂಬ ಲೇಖನವೂ ಸೇರಿದಂತೆ ಒಟ್ಟು ನಾಲ್ಕು ಪ್ರಬಂಧಗಳಿವೆ. ಮುಖ್ಯವಾಗಿ ಇದು ಆಸಕ್ತ ಕನ್ನಡೇತರರಿಗೆ ಕನ್ನಡ ರಂಗ ಭೂಮಿ ಹಾಗೂ ನಾಟಕ ಪರಂಪರೆಯ ಸ್ಥೂಲ ಪರಿಚಯವನ್ನು ಮಾಡಿಕೊಡತಕ್ಕ ಕೃತಿಯಾಗಿದೆ. ಈ ಕೃತಿಯಲ್ಲಿನ ಕುರ್ತಕೋಟಿಯವರ ಲೇಖನವು ಅದುವರೆಗಿನ ಕನ್ನಡ ನಾಟಕ ಪರಂಪರೆಯ ಬಗೆಗೆ ಪರಿಪೂರ್ಣ ಮಾಹಿತಿಯನ್ನೊದಗಿಸಿಕೊಡುವುದಿಲ್ಲ. ಕನ್ನಡದ ಮೊದಲ ಸಾಮಾಜಿಕ ನಾಟಕವೆಂದು ಪರಿಗಣಿತವಾದ ''ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ''ದ ಉಲ್ಲೇಖ ಇಲ್ಲಿಲ್ಲ. ಅದೇ ರೀತಿ ಕುವೆಂಪುರವರ ವಿವಾದಾಸ್ಪದ ನಾಟಕ ''ಶೂದ್ರತಪಸ್ವಿ'' ಇಲ್ಲಿ ಪ್ರಸ್ತಾಪಗೊಂಡಿಲ್ಲ.

**ಇತರ ಕೃತಿಗಳು**

ಇದುವರೆಗೆ ಗಮನಿಸಿದ ಕೃತಿಗಳಲ್ಲದೆ ಕುರ್ತಕೋಟಿಯವರ ಅನೇಕ ಕವಿತೆ, ಏಕಾಂಕ , ಹರಟೆ, ವಿಮರ್ಶೆ, ಮುನ್ನುಡಿ, ಬೆನ್ನುಡಿ ಹಾಗೂ ಇನ್ನಿತರ ಲೇಖನಗಳು ಕನ್ನಡದ ಬೇರೆ

ಬೇರೆ ಸಂಕಲನಗಳಲ್ಲಿ , ಅದೇ ರೀತಿ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ತಮ್ಮ ಇಪ್ಪತ್ತರ ಹರೆಯದಲ್ಲೇ ಶಂಕರ ಮೊಕಾಶಿ ಪುಣೇಕರ ಮತ್ತು ಗೋವಿಂದ ಕಣೇಕಲ್ಲರ ಜತೆ ಸೇರಿ ಕುರ್ತಕೋಟಿಯವರು ಪ್ರಕಟಿಸಿದ 'ಗಾನ ಕೇಳಿ'ಎಂಬ ಕವನ ಸಂಕಲನದ ಬಗೆಗೆ ಈಗಾಗಲೇ ಪ್ರಸ್ತಾಪಿಸಲಾಗಿದೆ. ನಂತರದ ದಿನಗಳಲ್ಲಿ ಅವರೂ ಜೆ.ಬಿ. ಜೋಶಿ (ಜಡ ಭರತ )ಯವರೂ ಸೇರಿ 'ಜೀವ ಫಲ' ವೆಂಬ ಇನ್ನೊಂದು ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಕುರ್ತಕೋಟಿಯವರು ಓರ್ವ ಸಮರ್ಥ ಅಂಕಣಕಾರರೂ ಹೌದೆಂಬುದನ್ನು 'ಉರಿಯ ನಾಲಗೆ 'ಎಂಬ ಕೃತಿಯ ವಿಶ್ಲೇಷಣೆಯ ಸಂದರ್ಭದಲ್ಲಿ ಗಮನಿಸಲಾಗಿದೆ.

ಕುರ್ತಕೋಟಿಯವರು ಕನ್ನಡ ಹಾಗೂ ಇಂಗ್ಲಿಷ್ ವಿದ್ವತ್ ಪತ್ರಿಕೆಗಳಿಗೆ, ಅದೇ ರೀತಿ ವಿಶ್ವಕೋಶಗಳಿಗೆ ಹಲವಾರು ಲೇಖನಗಳನ್ನು ನೀಡಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಭಾರತೀಯ ಸಾಹಿತ್ಯ ವಿಶ್ವಕೋಶಕ್ಕೆ ಡಿ. ಆರ್. ಬೇಂದ್ರೆ , ಬೆಟಗೇರಿ ಕೃಷ್ಣ ಶರ್ಮ, ಕೊಟ್ಟಲಗಿ ರಾಮಚಂದ್ರ, ದೇವುಡು ನರಸಿಂಹ ಶಾಸ್ತ್ರಿ, ಸಾಲಿ ರಾಮಚಂದ್ರರಾಯ ಮುಂತಾದ ಸಾಹಿತಿಗಳ ಕುರಿತೂ ಬೇಂದ್ರೆಯವರ ' ಗರಿ'ಯ ಕುರಿತೂ ಇಂಗ್ಲಿಷಿನಲ್ಲಿ ಲೇಖನ (ನಮೂದು)ಗಳನ್ನು ಬರೆದಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದಿಂದ ತೊಡಗಿ ಆಧುನಿಕ ಕನ್ನಡ ಸಾಹಿತ್ಯದ ವರೆಗಿನ ವಿಮರ್ಶಾತ್ಮಕ ಮಾಹಿತಿಯನ್ನೊದಗಿಸಿ ಕೊಡುವ 'ಸಾಹಿತ್ಯ ಸಂಗಾತಿ' ಎಂಬ ಗ್ರಂಥವೊಂದನ್ನು ಕುರ್ತಕೋಟಿಯವರು ಬರೆಯುತ್ತಿದ್ದು, ಅದನ್ನು ಹಂಪೆಯ ಕನ್ನಡ ವಿಶ್ವವಿದ್ಯಾಲಯವು ಕನ್ನಡ, ಇಂಗ್ಲಿಷ್‌ಗಳೆರಡರಲ್ಲೂ ಪ್ರಕಟಸಲಿದೆ. ಇವು ನಿತ್ಯ ಕ್ರಿಯಾಶೀಲರಾಗಿರುವ ಕೀರ್ತಿನಾಥರ ಇತ್ತೀಚಿನ ಬರವಣಿಗೆಗಳ ಒಂದೆರಡು ಉದಾಹರಣೆಗಳಷ್ಟೆ . ಬರವಣಿಗೆಯ ಜತೆಯಲ್ಲೇ ಅನೇಕ ಉನ್ನತ ಮಟ್ಟದ ವಿಚಾರ ಸಂಕಿರಣಗಳಲ್ಲಿ ವಿದ್ವತ್ ಪ್ರಬಂಧಗಳನ್ನೂ ಅವರು ಮಂಡಿಸುತ್ತಿದ್ದಾರೆ.

ಕೆಲವು ಹೊಸ ಶಬ್ದರೂಪಗಳನ್ನು ಟಂಕಿಸಿ ಕನ್ನಡ ಭಾಷಾಕೋಶಕ್ಕೆ ಸೇರ್ಪಡೆಗೊಳಿಸಿದ ಶ್ರೇಯಸ್ಸೂ ಕುರ್ತಕೋಟಿಯವರಿಗೆ ಸಲ್ಲುತ್ತದೆ. ಅಂಥವುಗಳಲ್ಲಿ ಇಂಗ್ಲಿಷಿನ Perspectiveಗೆ ಸಂವಾದಿಯಾಗಿ ( ಸನ್ನಿವೇಶ, ಪರಿಸರ , ಚೌಕಟ್ಟು ಇತ್ಯಾದಿ ಅರ್ಥಗಳಲ್ಲಿ) ಅವರು ಬಳಸಿದ 'ಪರಿಪ್ರೇಕ್ಷ್ಯ' ಎಂಬ ಪದವನ್ನು ಅವರ ಬರಹಗಳುದ್ದಕ್ಕೂ ನಾವು ವ್ಯಾಪಕವಾಗಿ ಗಮನಿಸಬಹುದು.

# ಕುರ್ತಕೋಟಿ - ವಿಮರ್ಶಕರು ಕಂಡಂತೆ

ಕೀರ್ತಿನಾಥ ಕುರ್ತಕೋಟಿಯವರ ಬಗೆಗೆ ಇದುವರೆಗೆ ಬಂದಿರುವ ವಿಮರ್ಶೆಗಳು ಬಹಳ ಕಡಿಮೆಯೆಂದೇ ಹೇಳಬಹುದು. ಅವರು ಮುಖ್ಯವಾಗಿ ಓರ್ವ ವಿಮರ್ಶಕರಾಗಿರುವುದೇ ಇದಕ್ಕೆ ಕಾರಣವಿರಬಹುದೋ ಏನೋ! ೧೯೫೮ ರಲ್ಲಿ ''ನಡೆದು ಬಂದ ದಾರಿ''ಸಂಪುಟಗಳ ಇತಿಹಾಸ ಪ್ರಬಂಧಗಳು ಪ್ರಕಟವಾದಾಗ, ಅದೇ ರೀತಿ ಮುಂದೆ ೧೯೬೨ ರಲ್ಲಿ ಅವರ ''ನವ್ಯ ಕಾವ್ಯ ಪ್ರಯೋಗ '' ಪ್ರಕಟವಾದಾಗ ವಿಮರ್ಶಕರಿಂದ ಮಿಶ್ರ ಪ್ರತಿಕ್ರಿಯೆಗಳು ಬಂದದ್ದಿವೆ. ಕೆಲವರು ಮೆಚ್ಚುಗೆ ವ್ಯಕ್ತ ಪಡಿಸಿದರೆ ಇನ್ನು ಕೆಲವರು ಅವರ ವಿಮರ್ಶನ ಪ್ರಜ್ಞೆಯ ಬಗ್ಗೆ ಕಟುವಾಗಿ ಟೀಕಿಸಿದರು. ಲಂಕೇಶರು ೧೯೭೦ ರಲ್ಲಿ ಪ್ರಕಟವಾದ ತಮ್ಮ 'ಪ್ರಸ್ತುತ' ಎಂಬ ವಿಮರ್ಶಾ ಸಂಕಲನದಲ್ಲಿ ಕುರ್ತಕೋಟಿಯವರ 'ನವ್ಯ ಕಾವ್ಯ ಪ್ರಯೋಗ'ದ ಬಗ್ಗೆ ಪ್ರತಿಕ್ರಿಯಿಸಿ ಒಂದು ಲೇಖನವನ್ನೇ ಬರೆದರು. ''ಅಡಿಗರು ; ಕುರ್ತಕೋಟಿಯವರ ಪ್ರಜ್ಞೆ.''ಎಂಬ ಪ್ರಸ್ತುತ ಲೇಖನದುದ್ದಕ್ಕೂ ಕುರ್ತಕೋಟಿಯವರ ವಿಮರ್ಶನ ಪ್ರಜ್ಞೆಯ ಬಗೆಗೆ ತೆಗಳಿಕೆಯ ಮಾತುಗಳೇ ತುಂಬಿಕೊಂಡಿವೆ. ಕುರ್ತಕೋಟಿಯವರು ಓರ್ವ ವಿಮರ್ಶಕರೇ ಅಲ್ಲ ಎಂಬ ತೀರ್ಮಾನಕ್ಕೆ ಲಂಕೇಶರಿಲ್ಲಿ ಬಂದುಬಿಡುತ್ತಾರೆ: ''ವಿಮರ್ಶೆಯ ಹೆಸರಲ್ಲಿ ಬಂದಿರುವ ಶ್ರೀ ಕುರ್ತಕೋಟಿಯವರ ಬೇಜವಾಬ್ದಾರಿತನಗಳು ಹೊಸ ಸಾಹಿತ್ಯದ ತಮಾಷೆಗಳಲ್ಲಿ ಮುಖ್ಯವಾದವು. ಚಿಂತನೆ ಮತ್ತು ಸಂವೇದನೆಗಳ ಸಂಪೂರ್ಣ ಗೈರು ಹಾಜರಿಯಿಂದಾಗಿ ಈ ತಮಾಷೆಗಳು ಹೊಸ ಸಾಹಿತ್ಯಕ್ಕೆ ಹೇಗೆ ಅಪಾಯಕರ ಎಂಬುದು ಇಲ್ಲಿಯವರೆಗೆ ಗುಟ್ಟಾಗಿಯೇ ಉಳಿದಿರುವುದು ಆಶ್ಚರ್ಯ. ಪಾರಿಭಾಷಿಕ ಶಬ್ದಗಳು, ಭೋರ್ಗರೆದು ಹರಿಯುವ ಮಾತುಗಳ ಗುಂಪುಗಳು, ಪಾಂಡಿತ್ಯದ ತೋರಿಕೆಗಳು ಇವುಗಳಿಂದಾಗಿ ಅನೇಕರು ಈ ಬರವಣಿಗೆಗಳು ಏನನ್ನು ಹೇಳುತ್ತವೆ ಎಂಬುದಕ್ಕೇ ಗಮನಕೊಟ್ಟಂತಿಲ್ಲ'' (ಪು. ೬೦) ಎನ್ನುತಾರೆ.

ಕುರ್ತುಕೋಟಿಯವರ ಬರವಣಿಗೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬಯಸುವವರಿಗೆ ಲಂಕೇಶರ ಮೇಲಿನ ಮಾತುಗಳು ಪೂರಕವಾಗಲಾರವು. ಕುರ್ತಕೋಟಿಯವರು ನವೋದಯ ಪಕ್ಷಪಾತಿಗಳಾಗಿರಬಹುದು. ಆ ಹಿನ್ನೆಲೆಯಲ್ಲಿ ನವ್ಯಕವಿಗಳ ಕಾವ್ಯ ಪ್ರಜ್ಞೆಗೂ ತತ್ಕಾಲೀನ ಭಾರತೀಯ ಬದುಕಿಗೂ ಯಾವುದೇ ಸಂಬಂಧವಿಲ್ಲವೆಂದು ಹೇಳಿರಬಹುದು. ಅಂದ ಮಾತ್ರಕ್ಕೆ ನವ್ಯಕಾವ್ಯದ ಬಗೆಗಿನ ಅವರ ವಿಶ್ಲೇಷಣೆ - ವಿಮರ್ಶೆಗಳು ಖಂಡಿತಕ್ಕೂ ಚಿಂತನೆ ಮತ್ತು ಸಂವೇದನೆಗಳ ಸಂಪೂರ್ಣ ಗೈರುಹಾಜರಿಯಿಂದಾದ ತಮಾಷೆಗಳಲ್ಲ. ಇತ್ತೀಚೆಗೆ ಕುರ್ತಕೋಟಿಯವರ 'ಉರಿಯ

ನಾಲಗೆ'ಯ ಬಗೆಗೆ ಬರೆಯುತ್ತಲೂ ಲಂಕೇಶರು ಹೆಚ್ಚು ಕಡಿಮೆ ಇವೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ''ಉರಿಯ ನಾಲಗೆ ಎಂಬ ಮೊದಲ ಲೇಖನದಲ್ಲಿಯೇ ಬೇಂದ್ರೆಯವರ ನೈತಿಕ ನಿಷ್ಠುರತೆಯನ್ನು ವಿವರಿಸಲು ಹೋಗಿ ಕುರ್ತಕೋಟಿ ಹಾಸ್ಯಾಸ್ಪದರಾಗಿದ್ದಾರೆ................ ಇಲ್ಲಿಯ ಅನೇಕ ಲೇಖನಗಳಲ್ಲಿ ಅಸ್ಪಷ್ಟತೆ, ಜೀರ್ಣಿಸಿಕೊಳ್ಳದ ವಿಚಾರಗಳು ಬಂದಿವೆ'' (ಲಂಕೇಶ್ ಪತ್ರಿಕೆ, ಜುಲೈ ೨೦, ೧೯೯೪) ಎನ್ನುತ್ತಾರೆ. ಆದರೂ ಕುರ್ತಕೋಟಿಯವರ ಬರಹಗಳ ಬಗೆಗೆ ಒಂದೆರಡು ಮೆಚ್ಚುಗೆಯ ಮಾತುಗಳನ್ನೂ ಲಂಕೇಶರಿಲ್ಲಿ ಹೇಳಿದ್ದಾರೆ.

೧೯೮೮ರಲ್ಲಿ ಸೇವೆಯಿಂದ ನಿವೃತ್ತರಾಗಿ ಕುರ್ತಕೋಟಿಯವರು ಧಾರವಾಡಕ್ಕೆ ಬಂದಾಗ ಅಲ್ಲಿನ ಅವರ ಅಭಿಮಾನಿಗಳ ಬಳಗವು ಅಭಿನಂದನಾ ಸಮಾರಂಭವೊಂದನ್ನು ಏರ್ಪಡಿಸಿ, ''ಕನ್ನಡದ ಕೀರ್ತಿ''ಯೆಂಬ ಅಭಿನಂದನ ಗ್ರಂಥವೊಂದನ್ನು ಅವರಿಗೆ ಸಮರ್ಪಿಸಿತು. ಅದರಲ್ಲಿ ಕುರ್ತಕೋಟಿಯವರ ಪತ್ನಿಯೂ ಸೇರಿದಂತೆ ಅವರನ್ನು ಹತ್ತಿರದಿಂದ ಬಲ್ಲ ಒಟ್ಟು ೬೬ ಮಂದಿ ಕನ್ನಡದ ಗಣ್ಯರು ಅವರ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳಿವೆ. ಕೊನೆಯಲ್ಲಿ ಅಭಿನಂದನ ಸಮಾರಂಭಕ್ಕೂ, ಕುರ್ತಕೋಟಿಯವರಿಗೂ ಶುಭವನ್ನು ಹಾರೈಸಿ ೯ ಮಂದಿ ಗಣ್ಯರು ಬರೆದ ಪತ್ರಗಳ ಆಯ್ದ ಭಾಗಗಳನ್ನೂ ನೀಡಲಾಗಿದೆ. ಆದರೆ ಒಂದೆರಡು ಬರಹಗಳನ್ನು ಬಿಟ್ಟರೆ ಬೇರೆ ಎಲ್ಲೂ ಅವರ ಕೃತಿಗಳ ಬಗೆಗಿನ ವಸ್ತುನಿಷ್ಠ ವಿಮರ್ಶೆ ನಮಗಿಲ್ಲಿ ಕಂಡುಬರುವುದಿಲ್ಲ. ಹಾಗಾಗಿ 'ಕನ್ನಡದ ಕೀರ್ತಿ' ಹೆಸರಿಗೆ ತಕ್ಕಂತೆ ಬರಿಯ ಅಭಿನಂದನ ಗ್ರಂಥವಷ್ಟೆ. ವ್ಯಕ್ತಿ ಅಥವಾ ಕೃತಿಯ ಬಗೆಗಿನ ಮಿತಿ ಮೀರಿದ ಟೀಕೆಯಷ್ಟೆ ವಸ್ತುನಿಷ್ಠ ವಿಮರ್ಶೆಯಾಗಲಾರದೆಂಬುದಕ್ಕೆ ಲಂಕೇಶರ ಲೇಖನ ನಮಗೆ ಉದಾಹರಣೆಯಾಗಿದ್ದರೆ, ಅತಿಯಾದ ಹೊಗಳಿಕೆ ಕೂಡ ಒಂದು ವಸ್ತುನಿಷ್ಠ ವಿಮರ್ಶೆಯಾಗಲಾರದೆಂಬುದಕ್ಕೆ ಪ್ರಸ್ತುತ ಗ್ರಂಥ ಉದಾಹರಣೆಯಾಗುತ್ತದೆ.

ಇಲ್ಲಿ ಕುರ್ತಕೋಟಿಯವರ ಬಗ್ಗೆ ಅಭಿನಂದನ ಲೇಖನಗಳನ್ನು, ಕವನಗಳನ್ನು ಬರೆದವರಲ್ಲಿ ಹೆಚ್ಚಿನವರೂ ಕನ್ನಡದ ಹೆಸರಾಂತ ಸಾಹಿತಿಗಳು ಇಲ್ಲವೆ ವಿಮರ್ಶಕರು. ಅವರ ವಿಮರ್ಶೆಯ ಮಹತ್ವದ ಬಗೆಗೆ, ಅವರಿಂದ ನಂತರದ ಪೀಳಿಗೆಯು ಪಡೆದಿರುವ ಪ್ರೇರಣೆ - ಪ್ರಯೋಜನಗಳ ಬಗೆಗೆ ಅನ್ಯಾನ್ಯ ಲೇಖಕರು ತಂತಮ್ಮ ಅಭಿಪ್ರಾಯಗಳನ್ನಿಲ್ಲಿ ವ್ಯಕ್ತಪಡಿಸಿದ್ದಾರೆ. ಉದಾಹರಣೆಗಾಗಿ ಕೆಲವರ ಬರಹಗಳ ಆಯ್ದ ಭಾಗಗಳನ್ನಿಲ್ಲಿ ಗಮನಿಸಬಹುದು :

ಜಿ.ಬಿ. ಜೋಶಿಯವರ ಮನೋಹರ ಗ್ರಂಥಮಾಲೆ ಮುಂದೆ ತರುವಲ್ಲಿ ಅವರ ಸಹಾಯ ಬಹಳ ದೊಡ್ಡದು. 'ನಡೆದು ಬಂದ ದಾರಿ' ಹಾಗೂ ಈ ಗ್ರಂಥಮಾಲೆ ಯಶಸ್ವಿಯಾದದ್ದು ಪ್ರೊ.ಕುರ್ತಕೋಟಿಯವರ ನೆರವಿನಿಂದಲೇ. ಕೀರ್ತಿಯವರ ಮುನ್ನುಡಿಗಾಗಿ ಅನೇಕರು ಹಾತೊರೆಯುತ್ತಾರೆ....... ಇವತ್ತಿನ ಸಿದ್ಧಹಸ್ತ ವಿಮರ್ಶಕರಲ್ಲಿ ಕುರ್ತಕೋಟಿಯವರಿಗೆ ಮೇಲಿನ ಸ್ಥಾನ, ಮೊದಲನೆಯ ಮಾನ ಉಂಟು...............

ಅವರು ವಿಮರ್ಶನ ಕಾರ್ಯದಿಂದ ಎಂದೂ ನಿವೃತ್ತರಾಗುವುದು ಸಾಧ್ಯವಿಲ್ಲ. ವಿಮರ್ಶೆಯೇ ಅವರ ಉಸಿರು.

*- ಶಂ.ಬಾ. ಜೋಶಿ; ಪು. ೩*

ಅವರಿಗೆ ಜ್ಞಾನದ ಕ್ಷೇತ್ರದಲ್ಲಿ ಎಲ್ಲವೂ ಸಮಾನ ಬೆಲೆಯುಳ್ಳವು. ಎಲ್ಲವೂ ಪರಸ್ಪರ ಹೊಂದಿಕೊಂಡು ಸಹಾಯವನ್ನು ಕೊಟ್ಟು, ಪಡೆದು ಬೆಳೆಯಬೇಕಾದವು.............. ಅವರ ಜ್ಞಾಪಕ ಶಕ್ತಿ, ಕಾವ್ಯ ಪ್ರೇಮ, ಸಹೃದಯತೆ, ವಿಸ್ತಾರವಾದ ಓದು ಇವುಗಳನ್ನು ಮೆಚ್ಚಿರುವವರು ಹಲವರು. ವಿಶೇಷವಾಗಿ ಕುಮಾರವ್ಯಾಸ, ಬೇಂದ್ರೆಯವರ ಬಗ್ಗೆ ಅವರು ಮಾತನಾಡಿರುವುದನ್ನು ಕೇಳಿರುವವರು ಆ ಬಗ್ಗೆ ಉತ್ಸಾಹದಿಂದ ಜ್ಞಾಪಿಸಿಕೊಳ್ಳುತ್ತಾರೆ.

*- ಎಂ. ಚಿದಾನಂದ ಮೂರ್ತಿ; ಪು. ೧೦.*

ಅತ್ತ ಭಾರತೀಯ ಸಂಸ್ಕೃತ ಸಾಹಿತ್ಯದ ಸರಿಯಾದ ಅರಿವು; ಇತ್ತ ಪಾಶ್ಚಾತ್ಯ ಸಾಹಿತ್ಯದ ಆಳವಾದ ಅಭ್ಯಾಸ. ಈ ಹಳತು ಹೊಸತುಗಳ ಸಂಗಮದಿಂದ ಅವರ ಬರವಣಿಗೆಯಲ್ಲಿ ಸಮತೋಲನದ ಹೊಸ ಪಾಕ ಬಂತು; ಹೊಸ ತೂಕ ಬಂತು. ಇದರಿಂದ ಕನ್ನಡ ಸಾಹಿತ್ಯವನ್ನು ತಟಸ್ಥವಾಗಿ ನೋಡಿ ವಿಶ್ಲೇಷಿಸುವುದು ಅವರಿಗೆ ಸಾಧ್ಯವಾಯಿತು. ಕನ್ನಡಕ್ಕೊಂದು ಆರೋಗ್ಯಶಾಲಿಯಾದ ವಿಮರ್ಶಾಪದ್ಧತಿಯ ''ಕೀರ್ತಿಪಾಕ'' ನಮಗೆ ದೊರಕುವಂತಾಯಿತು.

*-ಬನ್ನಂಜೆ ಗೋವಿಂದಾಚಾರ್ಯ, ಪು. ೧೩*

ವಿಮರ್ಶಾ ಕ್ಷೇತ್ರದಲ್ಲಿ ಅಧ್ಭುತವಾದ ಕೆಲಸ ಮಾಡಿ 'ಕೀರ್ತಿ' ವಂತರಾದ ಅವರು 'ನಡೆದು ಬಂದ ದಾರಿ' ಹಾಗೂ ಇತರ ಕೃತಿಗಳಲ್ಲಿ ಮೈಲುಗಲ್ಲುಗಳನ್ನು ನಿಲ್ಲಿಸಿದರು. ಇನ್ನು ಆ ದಾರಿಯಲ್ಲಿ ನಡೆಯುವ ಇಚ್ಛೆ ಅವರಿಗಿದ್ದಂತಿಲ್ಲ. ದೊಡ್ಡ ಕಾದಂಬರಿಯೊಂದನ್ನು ಬರೆಯುವ ಹಂಬಲ ಅವರಿಗಿದೆ.

*- ಚೆನ್ನವೀರ ಕಣವಿ; ಪು. ೧೪*

ಕನ್ನಡ ವಿಮರ್ಶೆಯ ಇತಿಹಾಸದಲ್ಲಿ ಶಾಶ್ವತವಾಗಿ ಉಳಿಯುವ ಹೆಸರು ಕುರ್ತಕೋಟಿಯವರದು. ವಿಮರ್ಶೆ ಎನ್ನುವುದು ಬೇಕಾದವರನ್ನು ಹೊಗಳುವ, ಬೇಡವಾದವರನ್ನು ತೆಗಳುವ, ಕೈತೂಕ, ಬಾಯಿ ಬಣ್ಣದ ಮಾತಾಗಿದ್ದಾಗ ಅದನ್ನು ವಸ್ತುನಿಷ್ಠ ಚಿಂತನೆಯ ಹೊಸ್ತಿಲು ಹತ್ತಿಸಿದವರು ಅವರು. ಸಂಸ್ಕೃತ, ಇಂಗ್ಲಿಷ್ ಮತ್ತು ಕನ್ನಡ ಈ ಮೂರು ಸಾಹಿತ್ಯಗಳ ಗಟ್ಟಿ ಹಿನ್ನೆಲೆಯಿರುತ್ತ, ಕನ್ನಡ ಕಾವ್ಯ ಪರಂಪರೆಯ ಬಗ್ಗೆ ಅವರಂತೆ ಅಧಿಕಾರಯುತವಾಗಿ ಮಾತನಾಡಬಲ್ಲವರು ಬೇರೆ ಯಾರಿದ್ದಾರೆ?.................... ಕನ್ನಡ ಸಾಹಿತ್ಯಕ್ಕೆ ವಿಮರ್ಶೆಯ ವಿವೇಕ ತಂದುಕೊಟ್ಟ ಕೀರ್ತಿನಾಥರನ್ನು ಕೇವಲ ಹಿರಿಯ ಗೆಳೆಯರೆಂದರೆ ಅವಿನಯದ ಮಾತಾದೀತು. ನನ್ನಂಥ ಅನೇಕ ಜನಕ್ಕೆ ಅವರು ಪರೋಕ್ಷ ಗುರು.

*- ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ; ಪು. ೪೩-೪೪*

ಇವರು ಬೇಂದ್ರೆಯವರ ಬಗ್ಗೆ ಬರೆಯಬೇಕಾದದ್ದು ಬಹಳಷ್ಟಿದೆ. ಇವರ ಸಂಪರ್ಕಕ್ಕೆ ಬಂದ ಹಿರಿಯ ಸಾಹಿತಿಗಳ ಜೀವನದ ವಿವರಗಳ ಬಗ್ಗೆ ಬರೆಯಬೇಕಾದ್ದಿದೆ. ಇವರು ತಮ್ಮ ಸಜ್ಜನಿಕೆ, ಹೆದರಿಕೆ ಮತ್ತು ಮುಲಾಜುಗಳನ್ನು ತಡೆಹಿಡಿದು, ಕೃತಿನಿಷ್ಠ ವಿಶ್ಲೇಷಣೆಗಳನ್ನು ಬರೆದರೆ, ಇವರಿಂದ ನಾವು ಕಲಿಯಬೇಕಾದದ್ದು ಬಹಳಷ್ಟಿದೆ.

*- ಸುಮತೀಂದ್ರ ನಾಡಿಗ, ಪು. ೪೭*

ಸಂಸ್ಕೃತ - ಇಂಗ್ಲಿಷ್ - ಕನ್ನಡ ಕೃತಿಗಳನ್ನು ಸಮಾನವಾಗಿ ಬಲ್ಲ ಪಂಡಿತ - ರಸಿಕರ ಪರಂಪರೆಗೆ ಸೇರಿದವರು ಇವರು. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿ ಪ್ರಾರಂಭವಾದ ಈ ಪರಂಪರೆಯ ಅತ್ಯುತ್ತಮ ಫಲಗಳಲ್ಲಿ ಅವರೊಬ್ಬರು. 'ಉತ್ತರರಾಮ ಚರಿತ'ದ ಅವರ ಅದ್ಭುತ ವಿಶ್ಲೇಷಣೆ ನಮ್ಮೆಲ್ಲನೇಕರನ್ನು ಸಂಸ್ಕೃತ ನಾಟಕಗಳನ್ನು ಸೀರಿಯಸ್ಸಾಗಿ ಓದಿ ಪಾಶ್ಚಾತ್ಯ ನಾಟಕ ಕೃತಿಗಳೊಡನೆ ಹೋಲಿಸಿ ಓದುವಂತೆ ಮಾಡಿತು. ಬೇಂದ್ರೆ ಕವನಗಳ ಮೇಲಿನ ಅವರ ವಿಶ್ಲೇಷಣೆ ಓದುವುದು ಬೇಂದ್ರೆ ಕಾವ್ಯ ಓದುವಷ್ಟೇ ರೋಮಾಂಚಕರವಾಗಿದೆ. 'ಆಮನಿ'ಯ ಬಳಿಕ ಹಳೆಯ ಪಾಳುಬಿದ್ದ ಮನೆಗಳನ್ನು ಅವರನ್ನು ಮರೆತು ನೋಡುವುದು ಅಸಾಧ್ಯವಾಗಿದೆ. ಮಕ್ಕಳ ನಾಟಕಕ್ಕೇ ಅದು ಹೊಸ ಅರ್ಥ ತಂದುಕೊಟ್ಟಿದೆ. ಬಹುಶಃ ಅವರು ಹೆಚ್ಚು ನಾಟಕ ಬರೆಯಬೇಕಿತ್ತು.

*- ರಾಮಚಂದ್ರ ದೇವ ಪು. ೪೯*

ನಿಮ್ಮ ಭಾಗದ ಗಾಳಿ ನಮ್ಮ ಕಡೆ ಬೀಸಿದರೆ
ಉಸಿರಾಡಿದೆವು ನಿಮ್ಮ ಹೆಸರು ಹೇಳಿ
ಅಷ್ಟೋ ಇಷ್ಟೋ ದಾರಿ ನಡೆದವಯ್ಯಾ
ನಿಮ್ಮ ಕಣ್ಣುಗಳ ಬೆಳಕಿನಲ್ಲಿ

*-ಚಂದ್ರಶೇಖರ ಕಂಬಾರ ಪು. ೫೪-೫೫*

ಮುಖ್ಯವಾಗಿ ನಾನು ಅವರಿಂದ ಕಲಿತದ್ದೇ ಹೆಚ್ಚು. ನನ್ನ ಸೃಜನಶೀಲತೆಯ ಒರತೆಗಳು ಒಂದೊಂದಾಗಿ ಬತ್ತುತ್ತಿವೆ ಎಂದು ಅನಿಸತೊಡಗಿದಾಗ ವಿಮರ್ಶೆಯನ್ನು ಹೆಚ್ಚು ಗಂಭೀರವಾಗಿ ತೆಗೆದುಕೊಂಡೆ. ಆಗ ನಾನು ಹೆಚ್ಚಾಗಿ ಓದಿದ್ದು ಕುರ್ತಕೋಟಿಯವರ ವಿಮರ್ಶೆಯನ್ನು. ಅವರು ಆಧುನಿಕ ಕನ್ನಡಕ್ಕೆ ಸಹಜವೆಂಬಂತೆ ರೂಢಿಸಿದ ವಿಮರ್ಶೆಯ ಭಾಷೆಯಿಂದ ಪ್ರಭಾವಿತನಾದೆ. ಅವರ ಬರವಣಿಗೆಯ ರೀತಿಯ ಪ್ರಭಾವದಲ್ಲೇ ನನ್ನದೇ ಆದ ರೀತಿಯನ್ನು ಹುಡುಕಿಕೊಂಡೆ. ವಿಶಿಷ್ಟ ಸಂಸ್ಕೃತಿಯುಳ್ಳ ಉತ್ತರ ಕರ್ನಾಟಕದ ಲೇಖಕನಾಗಿ ಇಲ್ಲಿಯ ಸಂವೇದನಶೀಲತೆ, ಭಾಷೆ, ವಿಚಾರಗಳ ಅನನ್ಯತೆಯನ್ನು ಉಳಿಸಿಕೊಳ್ಳಬೇಕೆಂಬ ನನ್ನ ತುಡಿತಗಳಿಗೆ ಕುರ್ತಕೋಟಿಯವರ ಬರವಣಿಗೆ ಸಹಾಯವಾಯಿತು.

*- ಗಿರಡ್ಡಿ ಗೋವಿಂದರಾಜ, ಪು. ೬೧*

ಕಲೆಯ ಪಕ್ಷಪಾತಿಯಾದುದರಿಂದ ಕುರ್ತಕೋಟಿಯವರ ವಿಮರ್ಶೆ ಇತ್ತೀಚಿನ ದಿನಗಳಲ್ಲಿ ಸಮಾಜ ಪರವಾಗಿ ಚಾಚುತ್ತಿರುವ ನಮ್ಮ ಕನ್ನಡ ಸಾಹಿತ್ಯದ ಒಲವುಗಳಿಗೆ ಸ್ಪಂದಿಸದೆ ಹೋಗಿದ್ದು ನನಗೆ ಅಚ್ಚರಿಯದಾಗಿ ಕಾಣುತ್ತಿದೆ. ನವೋದಯ ಸಾಹಿತಿಗಳ ಮತ್ತು ರಸ ಸಾಂಪ್ರದಾಯಕ ಸಾಹಿತ್ಯದ ಸಂವೇದನೆಗಳಿಗೆ ವಿಮರ್ಶಾತ್ಮಕವಾಗಿ ಸ್ಪಂದಿಸಿ, ಸಾಕಷ್ಟು ಅಮೂಲ್ಯ ನೋಟಗಳನ್ನು ಕೊಡಲಿಕ್ಕೆ ಶಕ್ಯವಾದ ಕುರ್ತಕೋಟಿಯವರ ವಿಮರ್ಶಾ ಪ್ರಜ್ಞೆ ಕಲೆಯನ್ನು ಗೌಣಗೊಳಿಸಿದೆ. ಹೊಸ ಸಮಾಜದ ಪ್ರಾತಿನಿಧಿಕ ಸಂವೇದನೆಗಳನ್ನು ಬಿಂಬಿಸುವ ಸದ್ಯದ ಸಾಹಿತ್ಯದ ಬಗೆಗೆ ವಹಿಸಿರುವುದು ಮೌನವೆ ಅಥವಾ ಉದಾಸೀನವೆ? ಎಂಬ ಪ್ರಶ್ನೆ ನನ್ನ ಮತ್ತು ಅನೇಕರ ಅನುಮಾನವೂ ಹೌದು; ಆತಂಕವೂ ಹೌದು.

*- ಶ್ಯಾಮಸುಂದರ ಬಿದರಕುಂದಿ; ಪು. ೬೪.*

ಮೇಲಿನವುಗಳಲ್ಲಿ ಬಹುಪಾಲು ಅಭಿಪ್ರಾಯಗಳು ಕುರ್ತಕೋಟಿಯವರನ್ನು ಕೀರ್ತಿಸಿ ಬರೆದವುಗಳಾಗಿದ್ದರೂ ಅವುಗಳಲ್ಲಿ ಸತ್ಯಾಂಶವಿಲ್ಲದೆ ಇಲ್ಲ. ಕುರ್ತಕೋಟಿಯವರು ತಮ್ಮ ಸಜ್ಜನಿಕೆ, ಹೆದರಿಕೆ ಮತ್ತು ಮುಲಾಜುಗಳನ್ನು ತಡೆಹಿಡಿದು, ಕೃತಿನಿಷ್ಠ ವಿಶ್ಲೇಷಣೆಗಳನ್ನು ಮಾಡಬೇಕೆಂಬ ಸಮತೀಂದ್ರ ನಾಡಿಗರ ನಮ್ರ ಸಲಹೆ; ಅದೇ ರೀತಿ ಹೊಸ ಸಮಾಜದ ಪ್ರಾತಿನಿಧಿಕ ಸಂವೇದನೆಗಳನ್ನು ಬಿಂಬಿಸುವ ಸದ್ಯದ ಸಾಹಿತ್ಯದ ಬಗೆಗೆ ಕುರ್ತಕೋಟಿಯವರು ವಹಿಸಿರುವುದು ಮೌನವೆ? ಅಥವಾ ಉದಾಸೀನವೆ?- ಎಂಬುದಾಗಿ ಬಿದರಕುಂದಿಯವರಲ್ಲಿ ಮೂಡುವ ಪ್ರಶ್ನೆ- ಇವುಗಳೆಲ್ಲಾ ಇಲ್ಲಿನ ಹೊಗಳುವಿಕೆಯ ಮಾತುಗಳ ನಡುವೆಯೂ ನಮ್ಮನ್ನು ಚಿಂತನೆಗೆ ಹಚ್ಚುತ್ತವೆ.

ಇವಲ್ಲದೆ, ಇತರೆಡೆಗಳಲ್ಲಿ ಬಿಡಿ ಬಿಡಿಯಾಗಿ ವ್ಯಕ್ತವಾಗಿರುವ ಕೆಲವರ ಅಭಿಪ್ರಾಯಗಳನ್ನೂ ಇಲ್ಲಿ ಗಮನಿಸಬಹುದಾಗಿದೆ:

''ಕುರ್ತಕೋಟಿಯವರ ವಿಮರ್ಶೆ ಅವರೇ ಘೋಷಿಸಿಕೊಂಡಂತೆ 'ತಣ್ಣಗಿನದೂ ಅಲ್ಲ', 'ನಿಷ್ಠುರ ಸತ್ಯದ್ದೂ ಅಲ್ಲ'. ಬದಲು ಅದು ಕೂಡಾ ಒಂದು ನಿರ್ದಿಷ್ಟ ದೃಷ್ಟಿಕೋನವನ್ನು, ಸೈದ್ಧಾಂತಿಕತೆಯನ್ನು ಓದುಗನ ಮೇಲೆ ಹೇರಲು ಪ್ರಯತ್ನಿಸುತ್ತಿರುತ್ತದೆ. ಭಾಷೆಗೆ ಉತ್ಪಾದಕ ಶಕ್ತಿ ಇದೆ ನಿಜ; ಆದರೆ ಅದು ಸಾಮಾಜಿಕ ನಿಯಂತ್ರಣಕ್ಕೂ ಒಳಪಟ್ಟಿರುತ್ತದೆ ಎಂಬುದನ್ನು ಮರೆಯಬಾರದು. ಹೀಗೆ ನೋಡಿದಾಗ ಬೇಂದ್ರೆಕಾವ್ಯ ಯಾಕೆ ಕುರ್ತಕೋಟಿಯವರನ್ನು ತನ್ನ ಜ್ಞಾತೃವನ್ನಾಗಿ ಅಂಗೀಕರಿಸಿಕೊಂಡು ಬಿಟ್ಟಿದೆ ಎಂಬುದಕ್ಕೆ ಉತ್ತರ ದೊರೆಯುತ್ತದೆ. ಬೇಂದ್ರೆ ಕಾವ್ಯದ ಬಗ್ಗೆಯೇ ಕುರ್ತಕೋಟಿಯವರು ಮತ್ತೆ ಮತ್ತೆ ಯಾಕೆ ಬರೆಯುತ್ತಾರೆ? ಎಂಬುದಕ್ಕೂ ಅಲ್ಲಿಯೇ ಉತ್ತರವಿದೆ.'' (ಕನ್ನಡ ವಾರ್ಷಿಕ ೧೯೯೩; ೨೩೧) ಎಂಬ ಪುರುಷೋತ್ತಮ ಬಿಳಿಮಲೆಯವರ ಮಾತು ಅರ್ಥಪೂರ್ಣವೂ, ವಿಚಾರಯೋಗ್ಯವೂ ಆಗಿದೆ.

''ಕೀರ್ತಿನಾಥ ಕುರ್ತಕೋಟಿ ನಮ್ಮ ಪ್ರಸಿದ್ಧ ವಿಮರ್ಶಕರಲ್ಲಿ ಒಬ್ಬರು. ಅವರು ತಮ್ಮ ಸೃಜನಶೀಲ ಬರಹಗಳಿಂದಲೂ ತಕ್ಕಷ್ಟು ಪ್ರಸಿದ್ಧರು. ಅವರ ಈ ಸೃಜನಶೀಲ

ಪ್ರತಿಭೆಯಿಂದಲೇ ಅವರ ವಿಮರ್ಶೆಗೆ ಒಂದು ಲಾಲಿತ್ಯದ ಸೊಗಸು ಸೇರಿಕೊಂಡಿದೆ ಎಂದರೆ ತಪ್ಪಾಗುವುದಿಲ್ಲ........... ಸಾಹಿತ್ಯಕ್ಕೆ ಸಂಬಂಧಿಸಿದ ನಾನಾ ಮೂಲಭೂತ ಪ್ರಶ್ನೆಗಳ ವಿಚಾರದಲ್ಲಿ ಕುರ್ತಕೋಟಿಯವರು ಆಗ ತಲೆ ಕೆಡಿಸಿಕೊಂಡಿದ್ದರೂ ವಿಮರ್ಶಕನಿಗೆ ಅಗತ್ಯವಾದ ಸಿದ್ಧತೆ ಅವರಲ್ಲಿತ್ತು. ಸಾಹಿತ್ಯದ ಸಂಸ್ಕಾರ ಬಾಲ್ಯದಿಂದಲೂ ಬೆಳೆದು ಬಂದಿತ್ತು.................

ಕುರ್ತಕೋಟಿಯವರು ಕಾಣಿಸಿಕೊಳ್ಳುವ ಮೊದಲು ಕನ್ನಡ ವಿಮರ್ಶೆಯ ಸ್ವರೂಪ ಅನಿಶ್ಚಿತವಾದುದಾಗಿತ್ತು. ಕಾವ್ಯಮೀಮಾಂಸೆಯ ಮೂಲಭೂತ ತತ್ವಗಳಿಗಷ್ಟೇ ಸಂಬಂಧಿಸಿದುದಾಗಿತ್ತು. ಹೆಚ್ಚು ಕಡಿಮೆ ಸಮೀಕ್ಷಾತ್ಮಕ ರೀತಿಯದಾಗಿತ್ತು. ಅದಕ್ಕೆ ಒಂದು ಖಚಿತ ರೂಪವನ್ನು ತಂದುಕೊಟ್ಟ, ಅದರ ಪಾರಿಭಾಷಿಕ ಸ್ವರೂಪವನ್ನು ವಿಸ್ತರಿಸಿದ, ಅದರ ವಿಶ್ಲೇಷಕ ಶಕ್ತಿಯನ್ನು ಹಿಗ್ಗಿಸಿದ ಕೀರ್ತಿ ಕೀರ್ತಿನಾಥರಿಗೆ ಸಲ್ಲಬೇಕು. ಆದರೆ ಅವರ ವಿಮರ್ಶೆ ಸಂಪೂರ್ಣವಾಗಿ ಪೂರ್ವಗ್ರಹ ಮುಕ್ತವಾಗಿದ್ದಿದ್ದರೆ ಇನ್ನೂ ಮಹತ್ವದ್ದೆನಿಸುತ್ತಿತ್ತು'' (ಸಂಪ್ರತಿ; ೨೨೪, ೨೨೫, ೨೨೮) ಎಂಬ ಹಾ.ಮಾ. ನಾಯಕರ ಮಾತುಗಳು ಕುರ್ತಕೋಟಿಯವರ ವಿಮರ್ಶೆಯ ವ್ಯಾಪ್ತಿ- ಮಿತಿಗಳೆರಡನ್ನೂ ಸ್ಪಷ್ಟಪಡಿಸುತ್ತವೆ.

'ಭಾರತೀಯ ಸಾಹಿತ್ಯ ಸಮೀಕ್ಷೆ' ಗ್ರಂಥದಲ್ಲಿ ಜಿ.ಎಸ್. ಆಮೂರರು ಕನ್ನಡ ಸಾಹಿತ್ಯ ವಿಮರ್ಶೆಯ ಬಗ್ಗೆ ಬರೆಯುತ್ತಾ ''ಕುರ್ತಕೋಟಿಯವರ ಸಾಧನೆಗಳಲ್ಲಿ ಮುಖ್ಯವಾದ ಅಂಶವೆಂದರೆ ಸ್ಪಷ್ಟತೆ ಮತ್ತು ಓದಿಸಿಕೊಳ್ಳುವ ಗುಣಗಳನ್ನು ಬಿಟ್ಟುಕೊಡದೆಯೆ ಸೂಕ್ಷ್ಮವಾದ ವಿಮರ್ಶಾತ್ಮಕ ನಿಷ್ಕರ್ಷೆಗಳನ್ನು ಮತ್ತು ವೈವಿಧ್ಯಪೂರ್ಣ ಸಾಹಿತ್ಯಿಕ ಅನುಭವವನ್ನು ಅಭಿವ್ಯಕ್ತಿಸಬಲ್ಲ ಭಾಷೆಯೊಂದನ್ನು ರೂಪಿಸಿಕೊಂಡದ್ದು'' (ಅನು: ರಾಜೇಂದ್ರ ಚೆನ್ನಿ; ಪು. ೧೧೦೨) ಎಂದಿದ್ದಾರೆ.

ಹೀಗೆ ನಂತರದ ಹಲವು ವಿಮರ್ಶಕರು ಕುರ್ತಕೋಟಿಯವರ ವಿಮರ್ಶೆಯನ್ನು ತಂತಮ್ಮ ಅನುಭವ- ಸಂಸ್ಕಾರಗಳ ಪಾತಳಿಯಲ್ಲಿ ಅರ್ಥೈಸಿಕೊಂಡು ವಿಶ್ಲೇಷಿಸಿದ್ದಾರೆ. ಅಂಥವುಗಳಲ್ಲಿ ಕೆಲವು ಬರಿಯ ಟೀಕೆಗಳಾಗಿ, ಮತ್ತೆ ಕೆಲವು ಅತಿಯಾದ ಪ್ರಶಂಸೆಗಳಾಗಿ ಇನ್ನು ಕೆಲವು ವಸ್ತುನಿಷ್ಠ ಬರಹಗಳಾಗಿ ನಮಗೆ ಕಂಡು ಬರುತ್ತವೆ.[೧]

---

೧. ಇನ್ನು ಕೆಲವು ವಿಮರ್ಶಕರ ಅಭಿಪ್ರಾಯಗಳನ್ನು ಹಿಂದಿನ ಅಧ್ಯಾಯದಲ್ಲಿ - ಕುರ್ತಕೋಟಿಯವರ ಸಾಹಿತ್ಯದ ಕುರಿತು ಚರ್ಚಿಸುವ ಸಂದರ್ಭದಲ್ಲಿ ಪ್ರಸ್ತಾಪಿಸಲಾಗಿದೆ.

# ಸಮಾಪನ

ಹೀಗೆ ಕವಿಯಾಗಿ, ನಾಟಕಕಾರರಾಗಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದ ಕುರ್ತಕೋಟಿಯವರು ಇಂದು ಓರ್ವ ಶ್ರೇಷ್ಠಮಟ್ಟದ ವಿಮರ್ಶಕರಾಗಿ ಅಲ್ಲಿ ನೆಲೆಯೂರಿದ್ದಾರೆ. ಅವರು ಸಂಸ್ಕೃತಿ ಪ್ರಿಯರು, ಪರಂಪರೆ ಹಾಗೂ ನವೋದಯ ಸಾಹಿತ್ಯದ ಬಗೆಗೆ ವಿಶೇಷ ಒಲವುಳ್ಳವರು ಎಂಬ ಕಾರಣಕ್ಕಾಗಿ ಅವರನ್ನು ನವೋದಯ ವಿಮರ್ಶಕರೆಂದು ತಿಳಿದರೆ ತಪ್ಪಾಗುತ್ತದೆ. ಕುರ್ತಕೋಟಿಯವರಿಂದಲಾಗಿ ಕನ್ನಡ ವಿಮರ್ಶೆಗೆ ನವೋದಯ ಪ್ರಾಪ್ತವಾದುದೇನೋ ನಿಜ. ಆದರೆ ಅವರದು ನವೋದಯ ಕಾಲದ ವಿಮರ್ಶೆಗಿಂತ ತೀರಾ ಭಿನ್ನವಾದುದು. ಅದು ಭಾರತೀಯ ಹಾಗೂ ಪಾಶ್ಚಾತ್ಯ ಕಾವ್ಯಮೀಮಾಂಸೆಗಳ ಜತೆಗೆ ಸಂಸ್ಕೃತ, ಕನ್ನಡ, ಇಂಗ್ಲೀಷ್ ಮುಂತಾದ ಭಾಷಾ ಸಾಹಿತ್ಯಗಳನ್ನು ಅರಗಿಸಿಕೊಂಡು ಪಾಕಗೊಂಡ ವಿಮರ್ಶಾಮಾರ್ಗ. ಸಂಸ್ಕೃತ, ಕನ್ನಡ, ಇಂಗ್ಲೀಷ್, ಮರಾಠಿ, ಗುಜರಾಥಿ ಇತ್ಯಾದಿ ಭಾಷೆಗಳ ಸಾಹಿತ್ಯದ ಬಗೆಗೆ ಅವರು ಪಾಂಡಿತ್ಯಪೂರ್ಣವಾಗಿ ಮಾತನಾಡಬಲ್ಲವರು; ಬರೆಯಬಲ್ಲವರು. ಕನ್ನಡದ ಪ್ರಾಚೀನ ಸಾಹಿತ್ಯದಿಂದ ಹಿಡಿದು ಆಧುನಿಕ ನವ್ಯ ಸಾಹಿತ್ಯದವರೆಗೆ ಕುರ್ತಕೋಟಿಯವರ ವಿಮರ್ಶೆಯ ಹರಹನ್ನು ಕಾಣಬಹುದು. ಆದರೆ ಸಮಕಾಲೀನ (ನವ್ಯೋತ್ತರ) ದಲಿತ, ಬಂಡಾಯ ಸಾಹಿತ್ಯಗಳ ಕುರಿತು ಅವರು ಯಾಕೆ ಬರೆದಿಲ್ಲ? ಎಂಬ ಪ್ರಶ್ನೆ ಹಲವು ಸಾಹಿತ್ಯ ಚಿಂತಕರನ್ನು ಕಾಡಿದ್ದಿದೆ. ಒಂದು ವೇಳೆ ಅವರು ''ಯುಗಧರ್ಮ ಹಾಗೂ ಸಾಹಿತ್ಯದರ್ಶನ''ದ ಎರಡನೆಯ (ಮುಂದುವರಿದ) ಭಾಗವನ್ನು ಬರೆದರೆಂದಾದರೆ ಈ ಪ್ರಶ್ನೆಗೆ ಉತ್ತರ ಸಿಗಬಹುದು.

ನವ್ಯ ಸಾಹಿತ್ಯದ ಉಚ್ಛ್ರಾಯ ಕಾಲದಲ್ಲಿ ಬರೆಯಹೊರಟು ಕನ್ನಡ ವಿಮರ್ಶೆಗೆ ನವೋದಯವನ್ನು ತಂದುಕೊಟ್ಟ ಕೀರ್ತಿನಾಥ ಕುರ್ತಕೋಟಿಯವರ ಕುರಿತು ಹೆಚ್ಚಿನ ಅಧ್ಯಯನಗಳೇನೂ ನಡೆದಂತಿಲ್ಲ. ಅವರ ಬದುಕು-ಬರಹಗಳ ಬಗೆಗಿನ ಆಳವೂ, ಗಂಭೀರವೂ ಆದ ಅಧ್ಯಯನ ಒಂದು ಪಿಎಚ್.ಡಿ. ಪ್ರಬಂಧಕ್ಕೆ ವಸ್ತುವಾಗಬಲ್ಲುದು. ಈ ನಿಟ್ಟಿನಲ್ಲಿ ಇನ್ನೂ ಆಗಬೇಕಾದ ಕೆಲಸಗಳು ಬಹಳಷ್ಟಿವೆ.

# ಅನುಬಂಧ ೧

## ಜೀವನ ಘಟ್ಟಗಳು

೧೩.೧೦.೧೯೨೮ : ಜನನ (ಧಾರವಾಡ ಜಿಲ್ಲೆಯ ಗದಗ ಸಮೀಪದ ಕುರ್ತಕೋಟಿಯಲ್ಲಿ)

೧೯೪೮ : ಶಂಕರ ಮೊಕಾಶಿ ಪುಣೇಕರ ಮತ್ತು ಗೋವಿಂದ ಕಣೇಕಲರೊಂದಿಗೆ - ''ಗಾನಕೇಳಿ'' ಕವನ ಸಂಕಲನ ಪ್ರಕಟಣೆ.

೧೯೫೦ : ಧಾರವಾಡದ ಕರ್ನಾಟಕ ಕಾಲೇಜಿನಿಂದ ಪದವಿ

೧೯೫೦-೫೫ : ಗದಗದ ವಿದ್ಯಾದಾನ ಸಮಿತಿ ಪ್ರೌಢಶಾಲೆಯಲ್ಲಿ ಶಿಕ್ಷಕನಾಗಿ ಸೇವೆ.

೧೯೫೫-೫೬ : ಬೆಳಗಾವಿಯ ಆರ್.ಪಿ.ಡಿ. ಕಾಲೇಜಿನಲ್ಲಿ ಟ್ಯೂಟರ್ ವೃತ್ತಿ

೧೯೫೬ : (i) ''ಆಮನಿ'' ನಾಟಕಕ್ಕೆ ಮುಂಬಯಿ ಸರಕಾರದ ಪ್ರಥಮ ಬಹುಮಾನ

(ii) ''ಸ್ವಪ್ನದರ್ಶಿ ಮತ್ತು ಇತರ ಗೀತನಾಟಕಗಳು'' ಕೃತಿಗೆ ಮುಂಬಯಿ ಸರಕಾರದ ದ್ವಿತೀಯ ಬಹುಮಾನ.

(iii) ಮನೋಹರ ಗ್ರಂಥಮಾಲೆಯ ಸಾಹಿತ್ಯ ಸಲಹೆಗಾರರಾಗಿ ಸೇವೆ ಪ್ರಾರಂಭ

೧೯೫೮ : (i) ಕರ್ನಾಟಕ ವಿಶ್ವವಿದ್ಯಾಲಯದಿಂದ ಆಂಗ್ಲಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ

(ii) ಜಿ. ಬಿ. ಜೋಶಿಯವರ ಜತೆ ಸೇರಿ ''ನಡೆದು ಬಂದ ದಾರಿ'' ಸಂಪುಟಗಳ ಪ್ರಕಟಣೆ.

೧೯೫೮ - ೬೨ : ಪುಣೆಯ ಸರ್ ಪರಶುರಾಮ ಭಾವು ಕಾಲೇಜಿನಲ್ಲಿ ಇಂಗ್ಲೀಷ್ ಅಧ್ಯಾಪನ

೧೯೬೨ : ಆನಂದದ (ಗುಜರಾತ್) ಸರ್ದಾರ್ ಪಟೇಲ್ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಉಪನ್ಯಾಸಕರಾಗಿ ನಿಯುಕ್ತಿ.

೧೯೭೨ : ವಿಮರ್ಶಾ ಕ್ಷೇತ್ರದಲ್ಲಿನ ಗಣನೀಯ ಸಾಧನೆಗಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಗೌರವ.

೧೯೮೩ - ೮೪ : ಕುರ್ತಕೋಟಿಯವರ ಮಾರ್ಗದರ್ಶನದಲ್ಲಿ ಮೊತ್ತ ಮೊದಲ ಪಿಎಚ್.ಡಿ. ಪದವಿ - ರಮಾಕಾಂತ ಜೋಶಿಯವರಿಗೆ.

೧೯೮೬ : ದೆಹಲಿ ದೂರದರ್ಶನದಿಂದ ''ಆಮನಿ'' ನಾಟಕ ಪ್ರಸಾರ

೧೯೮೯ : (i) ಸೇವೆಯಿಂದ ನಿವೃತ್ತಿ - ಧಾರವಾಡದಲ್ಲಿ ವಾಸ.

(ii) ''ಕನ್ನಡದ ಕೀರ್ತಿ'' ಅಭಿನಂದನ ಗ್ರಂಥ ಸಮರ್ಪಣೆ.

೧೯೯೦ : ಕರ್ನಾಟಕ ನಾಟಕ ಅಕಾಡೆಮಿ ಫೆಲೋಶಿಪ್

೧೯೯೩ : ''ಮರ್ಾಟೀ ಸಂಸ್ಕೃತಿ-ಕೆಲವು ಸಮಸ್ಯೆಗಳು'' ಎಂಬ ಅನುವಾದಿತ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

೧೯೯೪ : (i) ಭಾರತ ಸರಕಾರದ ಮಾನವ ಸಂಪನ್ಮೂಲ ಇಲಾಖೆಯ ಫೆಲೋಶಿಪ್

(ii) ''ಉರಿಯ ನಾಲಗೆ'' ಎಂಬ ಅಂಕಣ ಬರಹಗಳ ಸಂಕಲನಕ್ಕೆ ೧೯೯೩ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ (ಅತ್ಯುತ್ತಮ ಚಿಂತನ ಪ್ರಧಾನ ಕೃತಿ)

# ಅನುಬಂಧ ೨

## ಕುರ್ತಕೋಟಿಯವರ ಸಾಹಿತ್ಯ

**ನಾಟಕಗಳು**

೧. ಆ ಮನಿ; ೧೯೫೬; ಧಾರವಾಡ , ಮನೋಹರ ಗ್ರಂಥ ಮಾಲೆ

೨. ಚಂದ್ರ ಗುಪ್ತ; ೧೯೮೩; ಧಾರವಾಡ, ಮನೋಹರ ಗ್ರಂಥ ಮಾಲೆ

೩. ಸ್ವಪ್ನದರ್ಶಿ ಮತ್ತು ಇತರ ಗೀತ ನಾಟಕಗಳು; ೧೯೫೬; ಧಾರವಾಡ, ಮನೋಹರ ಗ್ರಂಥ ಮಾಲೆ

**ವಿಮರ್ಶೆಗಳು- ಅಂಕಣ ಬರಹಗಳು**

೧. ಉರಿಯ ನಾಲಗೆ; ೧೯೯೩; ಧಾರವಾಡ , ಮನೋಹರ ಗ್ರಂಥಮಾಲೆ

೨. ಕುಮಾರ ವ್ಯಾಸ ; ೧೯೮೯; ನವದೆಹಲಿ, ಸಾಹಿತ್ಯ ಅಕಾಡೆಮಿ

೩. ದ. ರಾ. ಬೇಂದ್ರೆ ; ೧೯೮೨; ಬೆಂಗಳೂರು, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ

೪. ನವ್ಯ ಕಾವ್ಯ ಪ್ರಯೋಗ; ೧೯೬೩; ಧಾರವಾಡ, ಮನೋಹರ ಗ್ರಂಥ ಮಾಲೆ

೫. ಬಯಲು - ಆಲಯ ; ೧೯೯೨; ಹಂಪಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ

೬. ಬಾರೋ ಸಾಧನ ಕೇರಿಗೆ; ೧೯೯೩; ಧಾರವಾಡ, ಮನೋಹರ, ಗ್ರಂಥಮಾಲೆ.

೭. ಬೇಂದ್ರೆಯವರ ಕಾವ್ಯದಲ್ಲಿ ಶ್ರುತಿ ಮತ್ತು ಕೃತಿ; ೧೯೮೪; ಧಾರವಾಡ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ.

೮. ಬೇಂದ್ರೆ ಹಾಗೂ ಕನ್ನಡ ಕಾವ್ಯ ಸ್ವರೂಪ; ೧೯೬೧; ಕಲ್ಬುರ್ಗಿ, ಕನ್ನಡ ಸಾಹಿತ್ಯ ಸಂಘ

೯. ಭೃಂಗದ ಬೆನ್ನೇರಿ; ೧೯೭೫; ಧಾರವಾಡ, ಮನೋಹರ ಗ್ರಂಥಮಾಲೆ.

೧೦. ಯಶೋಧರ ಚರಿತೆಯ ಕಾವ್ಯತಂತ್ರ; ೧೯೮೨; ಬೆಂಗಳೂರು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೧೧. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ; ೧೯೬೨; ಧಾರವಾಡ, ಮನೋಹರ ಗ್ರಂಥಮಾಲೆ.

೧೨. ವಿಮರ್ಶೆಯ ವಿನಯ ಕಾದಂಬರಿ; ೧೯೮೨; ಧಾರವಾಡ, ಮನೋಹರ ಗ್ರಂಥಮಾಲೆ.

೧೩. ವಿಮರ್ಶೆಯ ವಿನಯ-ನಾಟಕ; ೧೯೮೫; ಧಾರವಾಡ, ಮನೋಹರ ಗ್ರಂಥಮಾಲೆ.

೧೪. ಸಂಸ್ಕೃತಿ ಸ್ಪಂದನ; ೧೯೮೬; ಧಾರವಾಡ, ಮನೋಹರ ಗ್ರಂಥಮಾಲೆ

೧೫. ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ; ೧೯೯೦; ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

೧೬. ಹೊಸಗನ್ನಡದಲ್ಲಿ ಮಹಾಕಾವ್ಯ: ಶ್ರೀರಾಮಾಯಣದರ್ಶನಂ;.....

**ಅನುವಾದ:**

೧. ಮರ್ಹ್ಯಾಟೀ ಸಂಸ್ಕೃತಿ -ಕೆಲವು ಸಮಸ್ಯೆಗಳು (ಮರಾಠಿ ಮೂಲ : ಶಂ. ಬಾ. ಜೋಶಿ) ೧೯೯೦; ಬೆಂಗಳೂರು, ಸಾಹಿತ್ಯ ಅಕಾಡೆಮಿ.

೨. ಸ್ವಪ್ನ ನಾಟಕ (ಅಪ್ರಕಟಿತ)

**ಇತರರೊಂದಿಗೆ:**

೧. ಗಾನ ಕೇಳಿ (ಕವನ ಸಂಕಲನ- ಶಂಕರ ಮೊಕಾಶಿ ಪುಣೇಕರ ಮತ್ತು ಗೋವಿಂದ ಕಣ್ಮೇಕಲ ರೊಂದಿಗೆ); ೧೯೪೮.

೨. ಜೀವಫಲ (ಕವನ ಸಂಕಲನ-ಜಡಭರತರೊಂದಿಗೆ);....

**ಸಂಪಾದಿತ ಕೃತಿಗಳು:**

೧. ನಡೆದು ಬಂದ ದಾರಿ (೩ ಸಂಪುಟಗಳು - ಜಿ. ಬಿ. ಜೋಶಿಯವರೊಂದಿಗೆ); ೧೯೫೮; ಧಾರವಾಡ, ಮನೋಹರ ಗ್ರಂಥಮಾಲೆ.

೨. ಪುಟ ಬಂಗಾರ (೫ ಸಂಪುಟಗಳು-ಜಿ. ಬಿ. ಜೋಶಿಯವರೊಂದಿಗೆ); ೧೯೮೫-೮೬; ಧಾರವಾಡ, ಮನೋಹರ ಗ್ರಂಥಮಾಲೆ.

೩. ಮನ್ವಂತರ (ಅನಿಯತಕಾಲಿಕೆ-ಜಿ. ಬಿ. ಜೋಶಿಯವರೊಂದಿಗೆ); ೧೯೬೩-೬೮; ಧಾರವಾಡ; ಮನೋಹರ ಗ್ರಂಥಮಾಲೆ.

೪. ವಾಸುದೇವ ಪ್ರಶಸ್ತಿ (ಕೆರೂರು ಅಭಿನಂದನ- ಜಿ. ಬಿ. ಜೋಶಿಯವರೊಂದಿಗೆ); ೧೯೬೪; ಬಾಗಿಲು ಕೋಟೆ, ವಿನೋದಿನಿ ನಾಟ್ಯ ಸಭೆ.

5. The Tradition of Kannada Theatre; 1986; Bangalore, IBH Prakashana, on behalf of Karnataka Nataka Academy.

**ಲೇಖನಗಳು:-**

೧. ಅತ್ಯಂತ ನಾಗರಿಕ ಬೇಟೆ; [ಸಾಹಿತ್ಯ ವಿಮರ್ಶೆ-೧೯೮೯; ಸಂ: ಓ. ಎಲ್. ನಾಗಭೂಷಣ ಸ್ವಾಮಿ]; ಬೆಂಗಳೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ.

೨. ಕನ್ನಡದಲ್ಲಿ ಶೇಕ್ಸ್‌ಪಿಯರ್ [ಮನ್ವಂತರ -೩]; ೧೯೬೪; ಧಾರವಾಡ, ಮನೋಹರ ಗ್ರಂಥಮಾಲೆ.

೩. ಕನ್ನಡ ರಂಗ ಭೂಮಿ ಅಂದು- ಇಂದು [ಕನ್ನಡ ರಂಗಭೂಮಿ ಅಂದು-ಇಂದು]; ೧೯೭೪; ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ.

೪. ಕುಮಾರ ವ್ಯಾಸ: ಜೀವನ ದೃಷ್ಟಿ ಹಾಗೂ ಕಾವ್ಯ ಸ್ವರೂಪ ['ಕುಮಾರವ್ಯಾಸ' ಸಂ: ವಿ. ಸೀತಾರಾಮಯ್ಯ]; ೧೯೭೩; ಬೆಂಗಳೂರು, ಐ. ಬಿ. ಎಚ್. ಪ್ರಕಾಶನ.

೫. ಕೆ. ಎಸ್. ನ. ಅವರ ಕಾವ್ಯ ಧರ್ಮ ['ಚಂದನ' -ಸಂ: ಜಿ. ಎಸ್. ಶಿವರುದ್ರಪ್ಪ] ೧೯೭೨; ಬೆಂಗಳೂರು, ಕೆ. ಎಸ್. ನ. ಅಭಿನಂದನ ಸಮಿತಿ.

೬. ಕೆ. ಎಸ್. ನ. ಸುವರ್ಣ ಮಾಧ್ಯಮದ ಕಾವ್ಯ ['ಚಂದನ'- ಸಂ: ಜಿ. ಎಸ್. ಶಿವರುದ್ರಪ್ಪ]; ೧೯೭೨; ಬೆಂಗಳೂರು, ಕೆ. ಎಸ್. ನ. ಅಭಿನಂದನ ಸಮಿತಿ.

೭. ನಾಟಕದಲ್ಲಿ ಚಾರಿತ್ರಿಕ ವಸ್ತು ವಿನ್ಯಾಸ -ಸಂಸ ನಾಟಕ ಚಕ್ರ ['ರಂಗಧ್ವನಿ'- ಸಂ: ಪ್ರಕಾಶ್ ರಾವ್ ಪಯ್ಯಾರು]; ೧೯೯೧; ಮುಂಬಯಿ, ಧ್ವನಿ.

೮. ನಾಟಕ ಮತ್ತು ವಂಶಪ್ರಜ್ಞೆ (ಭಾಸನ ಪ್ರತಿಮಾ) [ಮನ್ವಂತರ ೫-೬; ನಾಟಕಾಂಕ] ೧೯೬೭; ಧಾರವಾಡ, ಮನೋಹರ ಗ್ರಂಥಮಾಲೆ.

೯. ನಾಟಕ ಮತ್ತು ಸಂಕೇತಕ್ರಿಯೆ (ಕಾಳಿದಾಸನ 'ಅಭಿಜ್ಞಾನ ಶಾಕುಂತಲಂ') [ಮನ್ವಂತರ ೫-೬; ನಾಟಕಾಂಕ]; ೧೯೬೭; ಧಾರವಾಡ, ಮನೋಹರ ಗ್ರಂಥಮಾಲೆ.

೧೦. ನಾಟಕ ಶಿಲ್ಪ (ಗಿರೀಶ್ ಕಾರ್ನಾಡರ ತುಘಲಕ್); [ಮನ್ವಂತರ ೫-೬ ; ನಾಟಕಾಂಕ]; ೧೯೬೭; ಧಾರವಾಡ, ಮನೋಹರ ಗ್ರಂಥಮಾಲೆ.

೧೧. ಪರಿಣತ ಪ್ರಜ್ಞೆಯ ನಾಟಕ (ಭವಭೂತಿಯ ಉತ್ತರ ರಾಮಚರಿತಂ) [ಮನ್ವಂತರ ೫-೬: ನಾಟಕಾಂಕ ]; ೧೯೬೭; ಧಾರವಾಡ, ಮನೋಹರ ಗ್ರಂಥಮಾಲೆ

೧೨. ಪೌರಾಣಿಕತೆ ಕಳಚಿಕೊಂಡ ಪರ್ವ ['ಎಸ್.ಎಲ್. ಭೈರಪ್ಪನವರ ಪರ್ವ- ಒಂದು ಸಮೀಕ್ಷೆ'- ಸಂ: ವಿಜಯಾ]; ೧೯೮೩; ಬೆಂಗಳೂರು, ಸ್ನೇಹವಲಯ - ಇಳಾ ಪ್ರಕಾಶನ

೧೩. ಸಮ್ಮುಖ [ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ನಿಯತವಾಗಿ ಪ್ರಕಟವಾಗುತ್ತಿರುವ ಅಂಕಣ ಬರಹಗಳು]

೧೪. ಸಾಹಿತ್ಯದಲ್ಲಿ ವೈಚಾರಿಕತೆ [ಮನ್ವಂತರ -೭]; ೧೯೬೮; ಧಾರವಾಡ ಮನೋಹರ ಗ್ರಂಥಮಾಲೆ.

೧೫. ಸಾಹಿತ್ಯ ಮತ್ತು ಸಂಸ್ಕೃತಿ [ಪ್ರಜಾವಾಣಿ ದೀಪಾವಳಿ ವಿಶೇಷಾಂಕ]; ೧೯೭೯

೧೬. ಹೊಸಗನ್ನಡದಲ್ಲಿ ಮಹಾಕಾವ್ಯ: ಶ್ರೀರಾಮಾಯಣ ದರ್ಶನಂ [ಮನ್ವಂತರ -೪]; ೧೯೬೫; ಧಾರವಾಡ, ಮನೋಹರ ಗ್ರಂಥಮಾಲೆ.

## ಮುನ್ನುಡಿ/ಬೆನ್ನುಡಿಗಳು

೧. ಉತ್ತರ (ಕವನ ಸಂಕಲನ); ಜಿ. ಎಸ್. ಸಿದ್ಧಲಿಂಗಯ್ಯ; ೧೯೬೪; ತುಮಕೂರು, ಶ್ರೀ ಪ್ರಕಾಶನ.

೨. ಋತುವಿಲಾಸ (ಅನುವಾದಿತ ಕಾವ್ಯ); ಎಚ್. ಎಸ್. ವೆಂಕಟೇಶ ಮೂರ್ತಿ; ೧೯೮೮; ಬೆಂಗಳೂರು, ಸುವಿದ್ಯಾ ಪ್ರಕಾಶನ.

೩. ಋಷ್ಯಶೃಂಗ (ನಾಟಕ); ಚಂದ್ರಶೇಖರ ಕಂಬಾರ; ೧೯೭೧; ಧಾರವಾಡ, ಮನೋಹರ ಗ್ರಂಥಮಾಲೆ.

೪. ಒಣ ಮರದ ಗಿಳಿಗಳು (ಕವನ ಸಂಕಲನ); ಎಚ್. ಎಸ್. ವೆಂಕಟೇಶ ಮೂರ್ತಿ; ೧೯೮೧; ಬೆಂಗಳೂರು, ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು.

೫. ಗಂಗವ್ವ ಗಂಗಾಮಾಯಿ (ಕಾದಂಬರಿ); ಶಂಕರ ಮೊಕಾಶಿ ಪುಣೇಕರ; ೧೯೫೬ ಧಾರವಾಡ, ಮನೋಹರ ಗ್ರಂಥಮಾಲೆ.

೬. ಚುರಮುರೀ ಶೇಷಗಿರಿರಾಯರ ಶಾಕುಂತಲ ನಾಟಕ; ಬಿ. ವಿ. ವೈಕುಂಠರಾಜು (ಸಂ); ೧೯೮೯; ಬೆಂಗಳೂರು, ಕರ್ನಾಟಕ ನಾಟಕ ಅಕಾಡೆಮಿ.

೭. ನನ್ನ ಜೀವನ ಸ್ಮೃತಿಗಳು (ಅನುಭವ ಕಥನ); ಆಲೂರು ವೆಂಕಟರಾಯ; ೧೯೭೪; ಧಾರವಾಡ, ಮನೋಹರ ಗ್ರಂಥಮಾಲೆ.

೮. ಬಾಲ ಬೋಧೆ (ಕವನ ಸಂಕಲನ); ಅಂಬಿಕಾ ತನಯ ದತ್ತ ; ೧೯೮೩; ಧಾರವಾಡ, ಮನೋಹರ ಗ್ರಂಥಮಾಲೆ.

೯. ಸಂಪರ್ಕ (ಕವನ ಸಂಕಲನ); ಗಂಗಾಧರ ಚಿತ್ತಾಲ; ೧೯೮೩; ಬೆಂಗಳೂರು, ಐ. ಬಿ. ಎಚ್. ಪ್ರಕಾಶನ.

೧೦. ಸಂಸ್ಕಾರ (ಕಾದಂಬರಿ); ಯು. ಆರ್. ಅನಂತಮೂರ್ತಿ; ೧೯೬೭; ಧಾರವಾಡ, ಮನೋಹರ ಗ್ರಂಥಮಾಲೆ.

೧೧. ಹುಲಿಯ ನೆರಳು (ನಾಟಕ); ಚಂದ್ರಶೇಖರ ಕಂಬಾರ; ೧೯೯೦; ಹೆಗ್ಗೋಡು, ಅಕ್ಷರ ಪ್ರಕಾಶನ.

**ಆಂಗ್ಲ ಲೇಖನಗಳು/ನಮೂದುಗಳು**

1. Bendre Dattatreya Ramachandra [Encyclopaedia of Indian Literature Vol I; Amaresh Datta (C.Ed.)]; 1987; New Delhi, Sahitya Academy.
2. Betageri Krishna Sharma [Encyclopaedia of Indian Literature Vol. I, Amaresh Datta (C.Ed.)]; 1987; New Delhi, Sahitya Academy.
3. Devudu Narasimha Shastri [Encyclopaedia of Indian Literature Vol. II; Amaresh Datta (C.Ed.)]; 1988; New Delhi, Sahitya Academy.
4. Gari [Encyclopaedia of Indian Literature Vol II; Amaresh Datta (C.Ed.)]; 1988; New Delhi, Sahitya Academy.
5. Kannada Drama - A Brief Survey [The Tradition of Kannada Theatre; K.D. Kurtkoti (Ed.)]; 1986; Bangalore. IBH Prakashana on behalf of Karnataka Nataka Academy.
6. Ramachandra Kottalgi [Encyclopaedia of Indian Literature Vol. IV; Amaresh Datta (C.Ed.)]; 1991; New Delhi, Sahitya Academy.

# ಅನುಬಂಧ - ೩

## ಕುರ್ತಕೋಟಿಯವರ ಬಗೆಗಿನ ಸಾಹಿತ್ಯ


**ಗ್ರಂಥಗಳು:**

೧. ಜೋಶಿ ಜಿ. ಬಿ. (ಸಂ); ೧೯೮೯; ಕನ್ನಡದ ಕೀರ್ತಿ; ಧಾರವಾಡ, ಕೀರ್ತಿನಾಥ ಕುರ್ತಕೋಟಿ ಸನ್ಮಾನ ಸಮಿತಿ- ಮನೋಹರ ಗ್ರಂಥ ಮಾಲೆ.

**ಬಿಡಿ ಲೇಖನಗಳು/ಉಲ್ಲೇಖನಗಳು:**

೧. ಅಮೂರ ಜಿ. ಎಸ್. (ಅನು: ರಾಜೇಂದ್ರ ಚೆನ್ನಿ); ೧೯೯೦; ಸಾಹಿತ್ಯ ವಿಮರ್ಶೆ -ಕನ್ನಡ: ಕೀರ್ತಿನಾಥ ಕುರ್ತಕೋಟಿ (ಭಾರತೀಯ ಸಾಹಿತ್ಯ ಸಮೀಕ್ಷೆ ಸಂ. ೨; ಜಿ. ಎಸ್. ಶಿವರುದ್ರಪ್ಪ) (ಪ್ರ. ಸಂ.); ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ

೨. ಕುಲಕರ್ಣಿ ಆರ್. ಜಿ.; ೧೯೫೮; 'ಆಮನಿ' ನಾಟಕದ ಒಂದು ಕಾಣ್ಕೆ; ['ಜಯಂತಿ' -ಸಂಪುಟ ೨೦; ಸಂಚಿಕೆ ೧೧]

೩. ಕೃಷ್ಣ ಕೊಲ್ಹಾರ ಕುಲಕರ್ಣಿ; ೧೯೮೫; ಕೀರ್ತಿನಾಥ ಕುರ್ತಕೋಟಿ; [ಕಸ್ತೂರಿ- ಜೂನ್ ೧೯೮೫]

೪. ದಿನೇಶ್ ಅಮೀನ್ ಮಟ್ಟು; ೧೯೯೪; ಮಹತ್ವದ ವಿಮರ್ಶಕ ಕುರ್ತಕೋಟಿ [ಪ್ರಜಾವಾಣಿ -೧೬, ಜನವರಿ, ೧೯೯೪]

೫. ನರಸಿಂಹ ಮೂರ್ತಿ ಕೆ.; ೧೯೯೩; ನವೋದಯ ವಿಮರ್ಶೆ [ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ; ಎಲ್ ಎಸ್. ಶೇಷಗಿರಿರಾವ್ (ಪ್ರ. ಸಂ.)]; ಬೆಂಗಳೂರು, ಉದಯ ಭಾನು ಕಲಾಸಂಘ.

೬. ನಾಗರಾಜ್ ಡಿ. ಆರ್. ; ೧೯೮೭; ಬೇಂದ್ರೆಯವರ ಕಾವ್ಯದಲ್ಲಿ ಭೂಮಿದರ್ಶನ ಘರ್ಷಣೆ ಮತ್ತು ಪರಿವರ್ತನೆ [ಶಕ್ತಿಶಾರದೆಯ ಮೇಳ; ಡಿ. ಆರ್. ನಾಗರಾಜ್]; ಸಾಗರ; ಅಕ್ಷರ ಪ್ರಕಾಶನ.

೭. ನಾಯಕ ಹಾ. ಮಾ; ೧೯೬೭; ಹತ್ತು ವರ್ಷಗಳ ಕನ್ನಡ ವಿಮರ್ಶೆ [ಸಮೀಕ್ಷೆ; ಹಾ.ಮಾ. ನಾಯಕ]; ಮೈಸೂರು, ಗೀತಾ ಬುಕ್‌ಹೌಸ್.

೮. ನಾಯಕ ಹಾ. ಮಾ. ; ೧೯೯೧; ಕೀರ್ತಿನಾತ ಕುರ್ತಕೋಟಿ [ಸಂಪ್ರತಿ -೩; ಹಾ.ಮಾ. ನಾಯಕ]; ಮೈಸೂರು, ಗೀತಾ ಬುಕ್ ಹೌಸ್.

೯. ಪುರುಷೋತ್ತಮ ಬಿಳಿಮಲೆ; ೧೯೯೫; ವಿಮರ್ಶೆ [ಕನ್ನಡ ವಾರ್ಷಿಕ. ೧೯೯೩; ಕರೀಗೌಡ ಬೀಚನಹಳ್ಳಿ (ಸಂ.)]; ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೦. ರಹಮತ್ ತರೀಕೆರೆ; ೧೯೯೪; ಸಾಂಸ್ಕೃತಿಕ ಸಂಘರ್ಷದ ಶೋಧನೆ: ಬಯಲು ಆಲಯ ಕೃತಿಯ ಸಮೀಕ್ಷೆ ['ಪ್ರಜಾವಾಣಿ' ಜುಲೈ ೪; ೧೯೯೩]

೧೧. ರಹಮತ್ ತರೀಕೆರೆ; ೧೯೯೪; ಗತ ಮತ್ತು ವರ್ತ ಮಾನಗಳ ಲಾಳಿಯಾಟ: ಉರಿಯ ನಾಲಗೆ [ಪುಸ್ತಕ ಮಾಹಿತಿ: ೧-೧೧]; ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ

೧೨. ರಾಘವೇಂದ್ರ ರಾವ್ ಎಚ್. ಎಸ್.; ೧೯೯೩; ವಿಮರ್ಶೆ-೧ [ ಕನ್ನಡ ವಾರ್ಷಿಕ: ೧೯೯೨; ಮಲ್ಲೇಪುರಂ ಜಿ. ವೆಂಕಟೇಶ (ಸಂ)]; ಹಂಪಿ; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೧೩. ರಾಘವೇಂದ್ರ ರಾವ್ ಎಚ್. ಎಸ್.; ೧೯೯೪; ಉರಿಯ ನಾಲಗೆ: ಹೊಸ ಆಯಾಮ ಹೊಸ ಎತ್ತರ ['ಪುಸ್ತಕ ಮಾಹಿತಿ': ೨-೧]; ಹಂಪಿ; ಪ್ರಸಾರಾಂಗ. ಕನ್ನಡ ವಿಶ್ವವಿದ್ಯಾಲಯ

೧೪. ಲಂಕೇಶ್ ಪಿ.; ೧೯೭೦; ಅಡಿಗರು; ಕುರ್ತಕೋಟಿಯವರ ಪ್ರಶ್ನೆ; ['ಪ್ರಸ್ತುತ'; ಪಿ. ಲಂಕೇಶ್]; ಸಾಗರ, ಅಕ್ಷರ ಪ್ರಕಾಶನ.

೧೫. ಲಂಕೇಶ್ ಪಿ. ; ೧೯೯೪; ಕುರ್ತಕೋಟಿ, ಕಾಯ್ಕಿಣಿಯವರ ಬರಹಗಳು ['ಲಂಕೇಶ್ ಪತ್ರಿಕೆ': ಜುಲೈ ೨೦, ೧೯೯೪]

೧೬. ಸುಮತೀಂದ್ರ ನಾಡಿಗ; ೧೯೯೪; ಕುರ್ತಕೋಟಿಯವರ ಆಮನಿ ['ವಿಮರ್ಶೆಯ ದಾರಿಯಲ್ಲಿ'; ಸುಮತೀಂದ್ರ ನಾಡಿಗ]; ಬೆಂಗಳೂರು, ಕರ್ನಾಟಕ ಬುಕ್ ಏಜೆನ್ಸಿ.

**ಆಂಗ್ಲ ಲೇಖನಗಳು:**

1. Amur G. S.; Literary Criticism-Kannada- K.D. Kurtkoti [The Comparative Indian Literature Vol II; K. M. George (Ed.)]; Trivandrum, Kerala Sahitya Academy

2. Raghavendra Rao H.S.; 1989; Kurtakoti Keertinatha Dattartreya [Encyclopaedia of Indian Literature Vol. III; Amaresh Datta (C.Ed.)]; New Delhi, Sahitya Academy.

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು